॥ ಧನ್ವಂತರಯೇ ನಮಃ ॥

ಲೋಲಂಬರಾಜಕೃತ

# ವೈದ್ಯಜೀವನ

## ಸುಪ್ರಸಿದ್ಧ ಪಂಡಿತ ಪುಟ್ಟಸಾಮಯ್ಯಕೃತ

## ದೀಪಿಕಾ

ಕರ್ಣಾಟಕ ಟೀಕಾಸಹಿತ




अग्ने नय सुपथा राये अस्मान्

(ದ್ವಿತೀಯ ಮುದ್ರಣ)

ಪ್ರಕಾಶಕ:—

ಆಯುರ್ವೇದ ವಿದ್ವಾನ್

**ಅಗರಂ ವೆಂಕಟರಾಮಪಂಡಿತ**



ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ.

1923

[ಬೆಲೆ ರೂ. ೧—೮—೦

To

The Memory

of

My Revered Father

**AGARAM PUTTASWAMY PANDIT**

*Professor of Ayurveda*

*Maharaja's Sanskrit College, Mysore*

*and*

*Physician in the Court of*

*His Highness The Maharaja of Mysore.*

By his son **Ayurveda Vidwan Agaram Venkatarama Pandit,** *Publisher.*)

ಶ್ರೀ:

ಬ್ರಹ್ಮದಕ್ಷಾಶ್ವಿದೇವೇಶ ಭರದ್ವಾಜಪುನರ್ವಸು।
ಹುತಾಶವೇಶಚರಕ ಪ್ರಭೃತಿಭ್ಯೋನಮೋನಮಃ॥
ಯೋಗೇನಚಿತ್ತಸ್ಯಪದೇನವಾಚಾಂ
ಮಲಂಶರೀರಸ್ಯಚವೈದ್ಯಕೇನ।
ಯೋಽಪಾಕರೋತ್ತಂಪ್ರವರಂಮುನೀನಾಂ
ಪತಂಜಲಿಂಪ್ರಾಂಜಲಿರಾನತೋಽಸ್ಮಿ॥

# ವಿಜ್ಞಾಪನೆ.

---

ಆಯುರ್ವೇದದ ಅಭಿವೃದ್ಧಿಗೆ ಅಡಚಣೆ ಎಂದರೆ ರಾಜಾಂಗದ ಪ್ರೋತ್ಸಾಹವು ಕಡಿಮೆಯಾಗಿರುವುದೊಂದೇ ಅಲ್ಲವು. ಗುಣಕಾರಿಗಳಾದ ಔಷಧಗಳೂ, ಶಾಸ್ತ್ರೀಯವಾದ ರೋಗಿಪರೀಕ್ಷೆಯೂ, ತಿಳಿಯದಿರುವುದೇ ಆಗಿರುವುದೆಂಬುದು ಹತ್ತಾರುವರ್ಷಗಳ ಆಯುರ್ವೇದ ಮತ್ತು ಪಾಶ್ಚಾತ್ಯ ವೈದ್ಯಶಾಸ್ತ್ರಗಳ ವ್ಯಾಸಂಗಾನುಭವಗಳಿಂದ ಕಂಡುಬಂದಿರುವುದು.

ಅದುಸಲುವಾಗಿ ಆಯುರ್ವೇದಾನುಸಾರವಾದ ರೋಗಿಪರೀಕ್ಷೆಯನ್ನು ಕುರಿತು ಪಾಶ್ಚಾತ್ಯಪದ್ಧತಿಯನ್ನೊಳಗೊಂಡು, ಒಂದು ಗ್ರಂಥವನ್ನು ಬರೆಯುತ್ತಿರುವೆನು. ಶಾಸ್ತ್ರೀಯವೂ ಗುಣಕಾರಿಗಳೂ ಆದ ಔಷಧಿಗಳನ್ನು ಬಳಕೆಗೆ ತರುವುದಾದರೂ ಆರ್ಷೇಯಪಂಡಿತನಾದ ನನಗೆ ಕರ್ತವ್ಯವೆಂದು ತಿಳಿದಿರುವೆನು.

ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲೆಯಲ್ಲಿ ವೈದ್ಯಶಾಸ್ತ್ರದ ಪ್ರಧಾನಾಧ್ಯಾಪಕರೂ, ಆಸ್ಥಾನವಿದ್ವಾಂಸರೂ ಆಗಿ ಕೀರ್ತಿಶೇಷರಾದ ನಮ್ಮ ತೀರ್ಥಪಾದರು ಶ್ರೀ ಪುಟ್ಟಸ್ವಾಮಿಪಂಡಿತರವರು, ವೈದ್ಯರತ್ನ ಪಂಡಿತ ಡಿ. ಗೋಪಾಲಾಚಾರ್ಯರಂತಹ ತಮ್ಮ ಶಿಷ್ಯರನ್ನು ಆಯು

ರ್ವೇದದ ಪುನರುಜ್ಜೀವನ ಮಹಾಕಾರ್ಯದಲ್ಲಿ ನಿಯೋಜಿಸಿದುದು ಮಾತ್ರವಲ್ಲ. ಹಲವು ಲೇಖನಗಳನ್ನೂ ಬರೆದಿರುವರು. ಅವುಗಳಲ್ಲೊಂದಾದ ಈ 'ದೀಪಿಕಾ' ಎಂಬ ಕನ್ನಡ ವ್ಯಾಖ್ಯಾನವನ್ನು ಮೂಲಗ್ರಂಥವಾದ 'ವೈದ್ಯ ಜೀವನ' ದೊಡನೆ ಕನ್ನಡಿಗರ ಉಪಯೋಗಕ್ಕಾಗಿ ಪ್ರಕಟಿಸಿದ್ದೇನೆ. ಈ ಗ್ರಂಥವು ೧೮೭೭ ನೆಯ ಕ್ರಿಸ್ತಾಬ್ದದಲ್ಲಿ ಮುದ್ರಿಸಲ್ಪಟ್ಟಿದ್ದು ಈವರೆಗೆ ಪ್ರತಿ ಗಳೆಲ್ಲವೂ ವೆಚ್ಚವಾಗಿ ಹೋಗಿದ್ದುವು. ಈಗ ಉಪಯುಕ್ತವಾದ ಹಲವು ಸಂಗತಿಗಳನ್ನು ಸೇರಿಸಿ, ವ್ಯಾಖ್ಯಾನದಲ್ಲಿ ವ್ಯತ್ಯಾಸವಿಲ್ಲದಂತೆ ಈ ದ್ವಿತೀಯ ಮುದ್ರಣವನ್ನು ಪ್ರಕಟಿಸಿರುವೆನು.

ಈ ಮೂಲ ಗ್ರಂಥಕರ್ತನು 'ಗುಜರಾತ್' ಪ್ರಾಂತದವನೆಂದು ಕಾಣುವುದು. ಈತನ ಹೆಸರು ಲೋಲಂಬರಾಜನು; ಕ್ರಿಸ್ತಾಬ್ದ ೧೬೩೩ ನೆಯ ಸಂವತ್ಸರದಲ್ಲಿ ಈತನಿದ್ದಿರಬಹುದೆಂದು ಹೇಳುವರು. ಈ ಕವಿಯ ತಂದೆಯ ಹೆಸರು ದಿವಾಕರ ಭಟ್ಟನು; ಜಾತಿಯಲ್ಲಿ ಬ್ರಾಹ್ಮಣನು. ಈ ಗ್ರಂಥವನ್ನು 'ರತ್ನಕಲೆ' ಎಂಬ ತನ್ನ ಪತ್ನಿಯನ್ನು ಕುರಿತು ಹೇಳಿದಂತೆ ಬರೆದಿರುವನು. ರತ್ನಕಲೆಯ ನಿಜವಾದ ಹೆಸರು "ಮುರಾಸಾ" ಎಂದು ಈ ಗ್ರಂಥದಿಂದಲೇ ವ್ಯಕ್ತವಾಗುವುದು. ಕೇವಲ ಪ್ರೇಮದಿಂದಲೇ ಮುರಾ ಸೆಯು ಕವಿಯಿಂದ ರತ್ನಕಲೆಯಾಗಿ ಸಂಬೋಧಿಸಲ್ಪಟ್ಟಿರುವಳೆಂದರೆ ಅತಿ ಶಯೋಕ್ತಿಯಾಗದು.

ಲೋಲಂಬರಾಜನು ಬಾಲ್ಯದಲ್ಲಿ ತುಂಬ ಅವಿವೇಕಿಯಾಗಿದ್ದು ಕೆಲವು ಕಾಲದನಂತರ ಪಶ್ಚಾತ್ತಾಪದಿಂದ ಸಪ್ತಶೃಂಗ ಪರ್ವತದಲ್ಲಿ ದೇವಿಯ ಆರಾಧನೆಯನ್ನು ಬಹಳ ನಿಷ್ಠೆಯಿಂದ ಮಾಡಿ ಸರ್ವಶಾಸ್ತ್ರಪಂಡಿತನಾದ ನೆಂದೂ, ಒಬ್ಬ ಮಹಮದೀಯ ರಾಜನ ಪತ್ನಿಗೆ ಉದರ ರೋಗವು ಪ್ರಾಪ್ತ ವಾಗಲು, ಈ ಕವಿಯು ಆಕೆ ಗರ್ಭಿಣಿ ಎಂದೂ, ಸ್ತ್ರೀ ಶಿಶುವನ್ನು ಹೆರುವ ಳೆಂದೂ, ಭವಿಷ್ಯತ್ತನ್ನು ತಿಳಿಸಿ, ಹಾಗೆ ಹುಟ್ಟುವ ಮಗುವನ್ನು ತನಗೆಯೇ ಕೊಡಬೇಕೆಂದೂ ಕೇಳಿಕೊಂಡಮೇರೆ ಕೈಸೇರಿದ ಸ್ತ್ರೀರತ್ನವೇ ಮುರಾಸಾ (ರತ್ನಕಳೆ) ಎಂದು ಕಥೆಯುಂಟು.

ಏಷಾಂನ ಚೇತೋ ಲಲನಾಸುಲಗ್ನಂ
ಮಗ್ನಂನಸಾಹಿತ್ಯ ಸುಧಾಸಮುದ್ರೇ ।
ಜ್ಞಾಸ್ಯಂತಿತೇಕಿನ್ನುಮಮ ಪ್ರಯಾಸಾನ್
ಅಂಧಾಯಥಾವಾರವಧೂವಿಲಾಸಾಃ ॥

ಎಂದು ಬರೆದು ಅರಸಿಕರು ತನ್ನೀಗ್ರಂಥದ ಮಾಧುರ್ಯವನ್ನು ಸವಿಯ ಲಾರರೆಂದೇ ಕವಿಯು ಕಂಠೋಕ್ತವಾಗಿ ಹೇಳಿರುವನು. "ವೈದ್ಯಗ್ರಂಥದಲ್ಲಿ ಶೃಂಗಾರಕ್ಕೇಕೆ ಪ್ರಾಧಾನ್ಯ! ಹೆಂಗಸನ್ನುದ್ದೇಶಿಸಿ ಹೇಳಲೇಕೆ?" ಎಂಬೀ ಪ್ರಶ್ನೆಗಳು ತಲೆದೋರುವುದು ಅತಿಶಯವಲ್ಲ. ಹಾಗೆ ಹೇಳುವವರು "ಭಕ್ತಿರಸಪ್ರಧಾನವಾದ ಶುಕವಾಕ್ಯಗಳನ್ನು ರಂಭೆಯನ್ನುದ್ದೇಶಿಸಿ ಹೇಳಿ ದುದರ ಗೂಢವೇನು? ಭಾಸ್ಕರಾಚಾರ್ಯನಂತಹ ಪಂಡಿತಶ್ರೇಷ್ಠನು ಗಣಿತ ಶಾಸ್ತ್ರವನ್ನು ಲೀಲಾವತಿಯನ್ನುದ್ದೇಶಿಸಿ ಬರೆದು ಲೀಲಾವತಿಯನ್ನಾಗಿಯೇ ಮಾಡಿದನೇಕೆ? ಯಾಜ್ಞವಲ್ಕ್ಯರಂತಹ ಮಹರ್ಷಿಗಳ ವೇದಾಂತಾನುವಾದ ದಲ್ಲಿ ಮೈತ್ರೇಯಿಗೇಕೆ ಮುಖ್ಯತ್ವ?" ಇಂತಹ ಅಸಂಖ್ಯಾತ ನಿದರ್ಶನ ಗಳನ್ನು ಕುರಿತು ತಮಗೆ ತಾವೇ ಚಿಂತಿಸುವುದು ಮೇಲು. ಮುಖ್ಯವಾಗಿ ಪ್ರಾಚೀನಪಂಡಿತರು ನೀರಸಗ್ರಂಥಗಳನ್ನು ಬರೆಯುವುದನ್ನರಿಯರು.

ನಾರಾಯಣಂ ಭಜತ ರೇ ಜಠರೇಣಯುಕ್ತಾಃ
ನಾರಾಯಣಂ ಭಜತ ರೇ ಪವನೇನಯುಕ್ತಾಃ ।
ನಾರಾಯಣಂ ಭಜತ ರೇ ಭವಭೀತಿಯುಕ್ತಾಃ
ನಾರಾಯಣಾತ್ಪರತರಂ ನಹಿಕಿಂಚಿದಸ್ತಿ ॥

ಇತ್ಯಾದಿ ಹಲವು ಶ್ಲೋಕಗಳನ್ನು ಓದಿಯೂ ಈ ಗ್ರಂಥದ ಪವಿತ್ರೋದ್ದೇಶ ವನ್ನು ಕುರಿತು ಎರಡಾಡಲು ನಾಲಿಗೆಯು ಹಿಂದೆಗೆಯದಿರದು.

ಪದಮಾಧುರ್ಯದಲ್ಲಿಯೂ ಶೈಲಿಯ ಸೊಗಸಿನಲ್ಲಿಯೂ ಭಾವ ಗಾಂಭೀರ್ಯದಲ್ಲಿಯೂ ಈ ಗ್ರಂಥವು ರಸಜ್ಞರನ್ನು ತಲೆದೂಗಿಸದಿರದು. ಜನರೆಲ್ಲರೂ ವಿಶೇಷ ವಿಷಯಲಂಪಟರಾಗಿದ್ದಿರಬಹುದಾದ ಕಾಲದಲ್ಲಿ ಅಂತಹರ ಉಪಯೋಗಕ್ಕಾಗಿಯೇ ಈ ಗ್ರಂಥವು ಬರೆಯಲ್ಪಟ್ಟಿದ್ದೀತು.

ಕಿಂವದಂತಿಯಂತೆ ಕವಿಯೇ ಭೋಗಲಾಲಸೆಯಲ್ಲಿ ಲೀನನಾಗಿದ್ದರೂ ಗ್ರಂಥೋಕ್ತವಾದ ಶ್ರೇಷ್ಠತಮ ಔಷಧಗಳನ್ನು ಪುರಸ್ಕರಿಸಲು ಅಭ್ಯಂತರವೇನೂ ಇರದು. ಈ ಗ್ರಂಥವನ್ನು ಪ್ರಕಟಿಸಿದುದರ ಉದ್ದೇಶವಾದರೂ ಅಷ್ಟುಮಾತ್ರವೇ.

ಈ ಗ್ರಂಥವು ಮರಾಟಿ, ಬಂಗಾಳಿ, ಹಿಂದೀ ಮೊದಲಾದ ಬೇರೆ ಬೇರೆ ಭಾಷೆಗಳಲ್ಲಿ ಪರಿವರ್ತಿತವಾಗಿ ವಿಶೇಷ ಪ್ರಚಾರದಲ್ಲಿರುವುದೇ ಇದರ ಮಹತ್ವದ ನಿದರ್ಶನವಾಗಿದೆ. ಇನ್ನು ಉಪಯೋಗದಲ್ಲಿ ಈ ಗ್ರಂಥವು ರೋಗಿಗೆ ಜೀವನದಾತನಾದ ವೈದ್ಯನಂತೆಯೂ, ವೈದ್ಯನಿಗೆ ಅವನ ಜೀವಿಕೆಯ ಸಹಕಾರಿಯಾಗಿಯೂ ಇರುವುದರಿಂದ ಇದು ವೈದ್ಯಜೀವನವೆಂಬ ಹೆಸರನ್ನು ಸಾರ್ಥಕಪಡಿಸಿಕೊಂಡಿರುವುದು.

ಗದಗಂಜನಾಯ ಚತುರೈಶ್ಚರಕಾದ್ಯೈಃ।
ಮುನಿಭಿರ್ನೃಣಾಂ ಕರುಣಯಾ ಕಥಿತಂಯತ್ ॥
ಅಖಿಲಂ ಲಿಖಾಮಿ ಖಲುತತ್ರರಹಸ್ಯಂ।
ಸ್ವಕಪೋಲ ಕಲ್ಪಿತ ಮಿಹಾಸ್ತಿನಕಿಂಚಿತ್ ॥

ಎಂಬ ಕವಿವಾಕ್ಯದಂತೆ ಚರಕಾದಿ ಪ್ರಾಚೀನ ಗ್ರಂಥಗಳಲ್ಲಿ ಹೇಳಿರುವ ಔಷಧಗಳನ್ನು ಮಾತ್ರ ಬರೆದಿರುವೆನಾಗಿ, ಆಯುರ್ವೇದಾಭಿಜ್ಞರು ಇದನ್ನು ಆದರಿಸದೆ ಬಿಡರು. ಆಯುರ್ವೇದೋಕ್ತವಾದ ಕೆಲವು ಪ್ರಸಿದ್ಧ ಮೂಲಿಕೆಗಳನ್ನು ಕುರಿತು ವಿಖ್ಯಾತ ಪಾಶ್ಚಾತ್ಯ ಪಂಡಿತರನೇಕರ ಅಭಿಪ್ರಾಯಗಳನ್ನು ಅಲ್ಲಲ್ಲಿ ಸೇರಿಸಿರುವೆನಾಗಿ ಪಾಶ್ಚಾತ್ಯ ಶಿಕ್ಷಣವನ್ನು ಪಡೆದ ಪಂಡಿತರಿಗೂ ಕೂಡ ಇದು ಪರಿಗ್ರಾಹ್ಯವೆಂದು ಭಾವಿಸುವೆನು.

ಗ್ರಂಥೋಕ್ತವಾದ ಔಷಧಿಗಳನ್ನು ಸ್ವಂತವಾಗಿ ಸಿದ್ಧಪಡಿಸಿಕೊಳ್ಳಲನುಕೂಲಿಸುವಂತೆ ದ್ರವ್ಯಶುದ್ಧಿಕ್ರಮವನ್ನೂ ಕಷಾಯಾದಿಗಳ ರಚನೆಯನ್ನೂ, ಔಷಧದ ಪರಿಮಾಣ ಪ್ರಮಾಣಗಳನ್ನೂ, ಪ್ರತಿನಿಧಿ ದ್ರವ್ಯಸಮುದಾಯವನ್ನೂ, ರೋಗಾನುಪಾನದ ಪಟ್ಟಿಯನ್ನೂ, ಪರಿಶಿಷ್ಟದಲ್ಲಿ ಸೇರಿಸಿದೆ. ಈ ಗ್ರಂಥವು ಪ್ರತಿಕುಟುಂಬದಲ್ಲಿಯೂ ಇರುವಷ್ಟು ಉಪಯೋಗವುಳ್ಳದಾದು

ದರಿಂದ, ಎಲ್ಲರಿಗೂ ಸುಲಭವಾಗಿ ದೊರೆವಂತೆ ಇದಕ್ಕೆ ಆದಷ್ಟು ಕಡಿಮೆಯ ಬೆಲೆಯನ್ನೇ ನಿಷ್ಕರ್ಷೆಮಾಡಿದೆ.

ಅಭಿಜ್ಞರು ಇದನ್ನು ಆದರದಿಂದ ಸ್ವೀಕರಿಸಿ, ಪುರುಷಾರ್ಥಸಾಧಕವಾದ ತಂತಮ್ಮ ಆರೋಗ್ಯ ಭಾಗ್ಯವನ್ನು ಕಾಪಾಡಿಕೊಳ್ಳುವುದಕ್ಕಾಗಿ ಇದರಲ್ಲಿ ಉಕ್ತವಾದ ಅಂಶಗಳನ್ನು ಸಾಧ್ಯವಾದಮಟ್ಟಿಗೆ ಅನುಭವಕ್ಕೆ ತಂದುಕೊಳ್ಳುವ ರಾದರೆ ನಾನು ಕೃತಾರ್ಥನೇ ಸರಿ.

ಮೆಡಿಕಲ್ ಸ್ಕೂಲ್,
ವಿಕ್ಟೋರಿಯಾ ಆಸ್ಪತ್ರೆ,
ಬೆಂಗಳೂರು ಸಿಟಿ.
15-3-1923.

ಆಯುರ್ವೇದವಿದ್ವಾನ್
**ಅಗರಂ ವೆಂಕಟರಾಮ ಪಂಡಿತ,**
ಪ್ರಕಾಶಕ.

The publisher claims *nothing original* in the English portion of the matter that is published in this book. A list of the most important publications that are consulted in compiling *extracts* is given below for the benefit of those who are eager to know more about the subject.


Bazar Medicine: **Waring's.**

Bengal Dispensatory: **O'Shanghuessy's.**

Bombay Drugs: **Sakharam Arjun's.**

Catalogue Bombay Plants.

Dictionary of the Economic Products of India.

Flora Indica: **Roxburgh's.**

Indian Herbalist.

Indigenous Drugs of India (**Kanailal Dey's**).

Materia Medica of the Hindus: **Dutt's.**

Punjab Plants: **Stewart's.**

Materia Medica, Patna.

Punjab Products: **Baden Powell's.**

Pharmacographia Indica: **Dymock's.**

Plants and Drugs of Sind: **Murray's.**

Materia Medica of Industan.

Supplement to the Pharmacopoeia of India.

Thirty-five years in the East: **Honnigberger's.**

Useful Plants of India: **Drury's.**

Materia Medica of India and their Therapeutics.

Indian Medical Plants.

Useful Plants of Bombay.

**Mooden Sheriff's** Materia Medica of Madras.
Reports of the Indigenous Drugs Committee.
**Watt's** Commercial Products of India.
**Watt's** Dictionary of Economic Products of India.
Cyclopedia of British India: **Balfour's.**
Annals of Indian Medicine.
Asiatic Researches.
Journal of the Bengal Asiatic Society.
Indian Medical Gazette.
Pharmaceutical Journal.
Vanoushadhi Darpana.
Journal of the Chemical Society.
**Pfleider's** Five Hundred Native Plants.
**Bentley and Trimen's** Medicinal Plants.
**Beddome's** Ferns of British India.
**Mukerji's** Amsterdam Catalogue.
**Lindley's** Flora Medica.

# CONTENTS.

## (Properties of the following drugs in English.)


Page.

೧. ಅಮೃತವಳ್ಳಿ. Tinospora Cordifolia. अमृता. ೧೦

೨. ನೆಲಬೇವು. Andrographis Paniculata. किराततिक्ता. ೧೦

೩. ಕಟುಕರೋಹಿಣೀ. Picrorhiza Kurrooa. कटुकी. ೧೪—೧೬

೪. ಕೊಡಸಿಗೆ. Holarrhena Antidysenterica. कुटज: ೪೮—೫೦

೫. ಬಿಲ್ವಪತ್ರೆ. Aegle Marmelos. बिल्वः. ೫೦—೫೪

೬. ನೇರಳೆ. Eugenia Jambolana. जम्बूः. ೬೧—೬೪

೭. ಮಾವು. Mangifera Indica. आम्रः. ೬೫—೬೭

೮. ಹರಳು. Recinus Communis. एरण्डः. ೮೬—೮೭

೯. ಉತ್ತರಣೆ. Achyranthes Aspera. अपामार्गः ೯೫—೯೭

೧೦. ಆಡುಸೋಗೆ. Adhatoda Vasica, Justica Adhatoda. वासकः. ೧೦೩—೧೦೫

೧೧. ಯಕ್ಕೆ. Calotropis Gigantea. अर्कः. ೧೧೬—೧೧೮

೧೨. ಮತ್ತಿ. Terminalia Arjuna. अर्ज्जुनः. ೧೨೪—೧೨೭

೧೩. ಕೊಮ್ಮೆ. Boehaavia Diffusa. पुनर्नवा. ೧೩೫—೧೩೮

೧೪. ನುಗ್ಗೆ. Moringa Pterygosperma. शिग्रुः. ೧೩೯—೧೪೧

೧೫. ಬಾಳೆ. Musa Sapientum. कदली. ೧೫೨—೧೫೭

೧೬. ಲಕ್ಕೀ. Vitex Nigundo and Vitex Trifolia. निर्गुण्डी, सिन्दुवारः. ೧೫೭—೧೫೯

# ವಿಷಯಾನುಕ್ರಮಣಿಕಾ.

[ಔಷಧವನ್ನು ಸ್ವಂತವಾಗಿ ತಯಾರುಮಾಡಿಕೊಳ್ಳುವವರು ಪರಿಶಿಷ್ಟದಲ್ಲಿಯೂ ಮತ್ತು ವ್ಯಾಖ್ಯಾನಕಾರರ ಪೀಠಿಕೆಯಲ್ಲೂ ಹೇಳಿರುವ ಅಂಶಗಳಿಗೆ ಗಮನಕೊಡಬೇಕಾಗಿ ಪ್ರಾರ್ಥನೆ.]


| ವಿಷಯ | | ಪುಟಸಂಖ್ಯೆ |
|---|---|---|
| ೧. | ಮಂಗಳಾಚರಣೆ | ೧ |
| ೨. | ಗ್ರಂಥಪ್ರಸ್ತಾವನೆ | ೩ |
| ೩. | ವೈದ್ಯಲಕ್ಷಣ | ೪ |
| ೪. | ಮೂಢವೈದ್ಯನಿಷೇಧ | ೬ |
| ೫. | ಪಥ್ಯದ ಅವಶ್ಯಕತೆ | ೬ |
| ೬. | ಸ್ವಾಹಂಕಾರಖಂಡನ | ೭ |
| ೭. | ಗ್ರಂಥಾಭಿರುಚಿ | ೮ |

ಜ್ವರಪ್ರಾಧಾನ್ಯ

| | | |
|---|---|---|
| ೮. | ಜ್ವರಪಾಚನಕ್ಕೆ ಔಷಧಿ—ದೇವದಾರುಕಷಾಯ | ೯ |
| ೯. | ವಾತಪಿತ್ತಜ್ವರಗಳಿಗೆ ಚಿಕಿತ್ಸೆ—ಅಮೃತ—ಕಿರಾತ—ಶುಂಠ್ಯಾದಿ ಕಷಾಯಗಳು | ೧೦ |
| ೧೦. | ಅಮೃತವಳ್ಳಿ. Tinospora Cordifolia. अमृता. | ೧೦ |
| ೧೧. | ನೆಲಬೇವು. Andrographis Paniculata. किराततिक्ता. | ೧೦ |
| ೧೨. | ವಾತಜ್ವರೋಪಚಾರ—ಉಶೀರಾದಿಕಷಾಯ | ೧೧ |
| ೧೩. | ವಾತಜ್ವರಕ್ಕೆ ಪೀಯೂಷಾದಿಕಷಾಯ | ೧೧ |
| ೧೪. | ವಾತಪಿತ್ತಜ್ವರಕ್ಕೆ ಅಮೃತಾದಿಕಷಾಯ | ೧೨ |
| ೧೫. | ಪಿತ್ತಜ್ವರ ಕಷಾಯವು—ಪರ್ಪಾಟಷ್ಟಕಾದಿ ಕಷಾಯ | ೧೨ |
| ೧೬. | ಪಿತ್ತಜ್ವರಕ್ಕೆ ಪರ್ಪಾಟಷ್ಟಕಾದಿ ಕಷಾಯದ ಶ್ರೇಷ್ಠತೆ | ೧೩ |
| ೧೭. | ಕಟುಕರೋಹಿಣೀ. Picrorhiza Kurrooa. कटुकी. | ೧೪—೧೬ |

| ವಿಷಯ | | ಪುಟಸಂಖ್ಯೆ |
|---|---|---|
| ೧೮. | ತರುಣಜ್ವರದಾಹಕ್ಕೆ ಮುಡಿವಾಳದ ಕಷಾಯ .. | ೧೭ |
| ೧೯. | ಷಡಂಗಕ್ವಾಥ .. .. .. | ೧೮ |
| ೨೦. | ಕಫಪಿತ್ತಜ್ವರಕ್ಕೆ ರಕ್ತಚಂದನಕಷಾಯ .. .. | ೧೮ |
| ೨೧. | ಪಿತ್ತಜ್ವರತಾಪಕ್ಕೆ ಸಹಸ್ರಧೌತಘೃತಲೇಹ .. .. | ೧೮ |
| ೨೨. | ಪಿತ್ತಜ್ವರಕ್ಕೆ ಮಕರಂದಸೇವನೆ .. .. | ೧೯ |
| ೨೩. | ಸ್ತ್ರೀಸೇವನಾದಿ ವಿವಿಧೋಪಚಾರಗಳು .. .. | ೨೦ |
| ೨೪. | ಪರಿಮಳವಾತಸೇವನೆ .. .. .. | ೨೦ |
| ೨೫. | ಕೊತ್ತುಂಬರೀಕಷಾಯ .. .. .. | ೨೨ |
| ೨೬. | ಪಿತ್ತಜ್ವರಕ್ಕೆ ವಿವಿಧೋಪಚಾರಗಳು .. .. | ೨೨ |
| ೨೭. | ವಾತಪಿತ್ತಜ್ವರಕ್ಕೆ ಪಂಚಮೂಲಾದಿಕಷಾಯ .. | ೨೩ |
| ೨೮. | ಕಾಸಶ್ವಾಸಯುಕ್ತಕಫಜ್ವರಕ್ಕೆ ಶೃಂಗ್ಯಾದಿಚೂರ್ಣ .. | ೨೪ |
| ೨೯. | ಜ್ವರದಲ್ಲಿ ಅರೋಚಕಕ್ಕೆ ಭಾರ್ಙ್ಗ್ಯಾದಿಕಷಾಯ .. | ೨೪ |
| ೩೦. | ಜ್ವರದಲ್ಲಿ ಕಟುಕರೋಹಿಣಿಯ ವಿಶೇಷಗುಣ .. .. | ೨೫ |
| ೩೧. | ಅರೋಚಕಕ್ಕೆ ಮಾತುಳುಂಗಪ್ರಕ್ರಿಯೆ .. .. | ೨೬ |
| ೩೨. | ಸನ್ನಿಪಾತಜ್ವರಕ್ಕೆ ಗ್ರಂಥ್ಯಾದಿಕಷಾಯ .. .. | ೨೮ |
| ೩೩. | ವೈದ್ಯಪ್ರಾಶಸ್ತ್ಯ .. .. .. | ೨೮ |
| ೩೪. | ಕರ್ಣಮೂಲಶೋಫೆಗೆ ರಾಸ್ನಾದಿಲೇಪ .. .. | ೩೦ |
| ೩೫. | ಅರ್ಕಾದಿಕಷಾಯ .. .. .. | ೩೧ |
| ೩೬. | ತಿಕ್ತಾದಿಕಷಾಯ .. .. .. | ೩೧ |
| ೩೭. | ಜೀರ್ಣಜ್ವರಚಿಕಿತ್ಸಾ—ಪಂಚಮೂಲಕಷಾಯ, ಪಿಪ್ಪಲೀಚೂರ್ಣಸೇವನ .. .. .. | ೩೨ |
| ೩೮. | ಜೀರ್ಣಜ್ವರಕ್ಕೆ ಅಮೃತಾದಿಕಷಾಯ .. | ೩೩ |
| ೩೯. | ಪಂಚಮೂಲಕಷಾಯ .. .. .. | ೩೩ |
| ೪೦. | ಶಟ್ಯಾದಿಕಷಾಯ .. .. .. | ೩೪ |
| ೪೧. | ಏಕಾಹಿಕಜ್ವರಕ್ಕೆ ವಾಶಾದಿಕಷಾಯ .. .. | ೩೪ |
| ೪೨. | ತ್ರ್ಯಾಹಿಕಜ್ವರಕ್ಕೆ ರಕ್ತಚಂದನಾದಿಕಷಾಯ .. .. | ೩೫ |
| ೪೩. | ಚಾತುರ್ಥಿಕಜ್ವರಕ್ಕೆ ಪುರಾಣಘೃತನಸ್ಯ .. .. | ೩೬ |

| ವಿಷಯ | | ಪುಟಸಂಖ್ಯೆ |
|---|---|---|
| ೪೪. | ಚಾತುರ್ಥಿಕಕ್ಕೆ ನಸ್ಯಪ್ರಯೋಗ .. .. | ೩೬ |
| ೪೫. | ಚಾತುರ್ಥಿಕಕ್ಕೆ ದೇವದಾರುಕಷಾಯ .. .. | ೩೬ |
| ೪೬. | ಚಾತುರ್ಥಿಕದಲ್ಲಿ ತಣ್ಣೀರನ್ನು ಕುಡಿಸುವಿಕೆ .. | ೩೭ |
| ೪೭. | ಶೀತಜ್ವರಚಿಕಿತ್ಸಾ—ಉಪಚಾರಗಳು .. .. | ೩೮ |
| ೪೮. | ದ್ರಾಕ್ಷಾದಿಕಷಾಯ .. ... .. | ೩೮ |
| ೪೯. | ಶೀತಜ್ವರಕ್ಕೆ ಅಮೃತಾದಿಕಷಾಯ .. .. | ೩೯ |
| ೫೦. | ಈ ಅರ್ಥವನ್ನೇ ಬೋಧಿಸುವ ಶ್ಲೋಕಾಂತರವು .. | ೩೯ |
| ೫೧. | ವಿಷಮಜ್ವರಾಪಹಾರಿಗಳು .. .. .. | ೪೦ |
| ೫೨. | ವಾತವ್ಯಾಧಿಗೆ ಬೆಳ್ಳುಳ್ಳಿಕಲ್ಕ .. .. .. | ೪೦ |
| ೫೩. | ಪಟೋಲಾದಿಕಷಾಯ .. .. .. | ೪೧ |
| ೫೪. | ಪುರಾಣವಿಷಮಜ್ವರಕ್ಕೆ ಪಟೋಲಾದಿಕಷಾಯ .. | ೪೧ |
| ೫೫. | ವಿಷಮಜ್ವರದಲ್ಲಿ ಸೊಗದೇಬೇರಿನಕಷಾಯ .. .. | ೪೨ |
| ೫೬. | ವಿಷಮಜ್ವರದಲ್ಲಿ ತಲೆಗೆ ಲೇಪ .. .. .. | ೪೩ |
| ೫೭. | ಮಧುರಾದಿ ಬೇವಿನಪಟ್ಟೆಕಷಾಯ .. .. | ೪೩ |
| ೫೮. | ಅಮೃತಾದಿಕಷಾಯ .. .. .. | ೪೪ |
| ೫೯. | ಜ್ವರಕ್ಕೆ ಧೂಪವು .. .. .. | ೪೪ |
| ೬೦. | ಮರುಕಳಿಸಿಬಂದ ಜ್ವರಕ್ಕೆ ತಿಕ್ತಾದಿಕಷಾಯ .. | ೪೫ |
| ೬೧. | ವಿಷಮಜ್ವರದಲ್ಲಿ ಗೋಪ್ಯಾದಿ ಸೊಗದೆಬೇರುಘೃತವು .. | ೪೫ |
| ೬೨. | ಅಷ್ಟಜ್ವರನಾಶಕ್ಕೆ ವಿವಿಧಸತ್ಕಾರ್ಯಗಳು .. .. | ೪೬ |
| ೬೩. | ಲಘುಭೋಜನಕಾಲ .. .. .. | ೪೬ |


## ಅಥ ಜ್ವರಾತಿಸಾರಪ್ರತೀಕಾರಃ.


| | | |
|---|---|---|
| ೧. | ಅಮೃತಾದಿಕಷಾಯ .. .. .. | ೪೭ |
| ೨. | ರಕ್ತಚಂದನಾದಿಕಷಾಯ .. .. .. | ೪೮ |
| ೩. | ಕೊಡಸಿಗೆ. Holarrhena Antidysenterica. कुटजः | ೪೮—೫೦ |
| ೪. | ಬಿಲ್ವಪತ್ರೆ. Aegle Marmelos. बिल्वः .. | ೫೦—೫೪ |
| ೫. | ಪಂಚಮೂಲಾದಿಕಷಾಯವು .. .. | ೫೪ |
| ೬. | ಗುರುಪಂಚಮೂಲ ಲಘುಪಂಚಮೂಲಗಳ ಪ್ರಯೋಗ .. | ೫೫ |

| ವಿಷಯ | | ಪುಟಸಂಖ್ಯೆ |
|---|---|---|
| ೭. | ಶೋಫಾತಿಸಾರದಲ್ಲಿ ದೇವದಾರ್ವಾದಿಕಷಾಯವು | ೫೬ |
| ೮. | ಧಾನ್ಯಪಂಚಕ ಕಷಾಯವು | ೫೬ |
| ೯. | ಪಿತ್ತಾತಿಸಾರದಲ್ಲಿ ಧಾನ್ಯಾದಿ (ಕೊತ್ತುಂಬರೀ ಬೀಜದ) ಕಷಾಯವು | ೫೭ |
| ೧೦. | ಇಂದ್ರಯವಾದಿಚೂರ್ಣವು | ೫೮ |
| ೧೧. | ಶುಂಠ್ಯಾದಿಚೂರ್ಣ | ೫೮ |
| ೧೨. | ನಿಶೋತ್ತರಾದಿ (ತಿಗಡೇಬೇರು) ಚೂರ್ಣ | ೫೯ |
| ೧೩. | ರಕ್ತಾಮಾತೀಸಾರದಲ್ಲಿ ಕುಟಜಾದಿಕಷಾಯವು | ೫೯ |
| ೧೪. | ಜೀರ್ಣಾತಿಸಾರಕ್ಕೆ ಗಂಗಾಧರಚೂರ್ಣವು | ೬೦ |
| ೧೫. | ನೇರಳೆ. Eugenia Jambolana. जम्बूः | ೬೧—೬೪ |
| ೧೬. | ಮಾವು. Mangifera Indica. आम्रः | ೬೫—೬೭ |
| ೧೭. | ರಕ್ತಾತಿಸಾರದಲ್ಲಿ ದಾಡಿಮಾದಿ ಕಷಾಯ | ೬೭ |
| ೧೮. | ರಕ್ತಚಂದನಪ್ರಯೋಗ | ೬೭ |
| ೧೯. | ಬಿಲ್ವಸೇವನೆ | ೬೮ |
| ೨೦. | ಜಾತೀಫಲಾದಿಚೂರ್ಣ | ೬೯ |


## ಅಥ ಗ್ರಹಣೀಚಿಕಿತ್ಸಾ.


| | | |
|---|---|---|
| ೧. | ಯವಾನ್ಯಾದಿಚೂರ್ಣ | ೬೯ |
| ೨. | ಪುನರ್ನವಾದಿಕ್ವಾಥ | ೭೦ |
| ೩. | ಶುಂಠೀಕಷಾಯ ಮತ್ತು ಘೃತ | ೭೦ |
| ೪. | ಪಾಠಾದಿಚೂರ್ಣ | ೭೧ |
| ೫. | ರತ್ನಕಳಾಚೂರ್ಣ | ೭೧ |
| ೬. | ಅಜಾಜಿಕಾದಿಚೂರ್ಣ | ೭೨ |
| ೭. | ಕ್ಷಾರಚೂರ್ಣ | ೭೩ |
| ೮. | ದ್ವಿಕ್ಷಾರಾದಿಚೂರ್ಣ | ೭೪ |
| ೯. | ಚಿತ್ರಕಾದಿಚೂರ್ಣ | ೭೪ |
| ೧೦. | ರುಚಿಕಾದಿಚೂರ್ಣ | ೭೫ |
| ೧೧. | ಘನಕ್ಷೀರ | ೭೫ |

| ವಿಷಯ | ಅಥ ಕಾಸಶ್ವಾಸಚಿಕಿತ್ಸಾ. | ಪುಟಸಂಖ್ಯೆ |
|---|---|---|
| ೧. | ಲಘುಪಂಚಮೂಲಕಷಾಯ .. .. | ೭೬ |
| ೨. | ಘನಾದಿವಟಿ .. .. .. | ೭೬ |
| ೩. | ವಿಭೀತಕಪ್ರಯೋಗ .. .. .. | ೭೬ |
| ೪. | ಆರ್ದ್ರಕಾದಿಲೇಹ .. .. .. | ೭೭ |
| ೫. | ಚಿಂತಾಮಣಿಚೂರ್ಣ .. .. .. | ೭೮ |
| ೬. | ಆಡುಸೋಗೇಕಷಾಯ .. .. .. | ೭೮ |
| ೭. | ಲವಂಗಾದಿವಟಿ .. .. .. | ೭೯ |
| ೮. | ಶುಂಠೀಕಷಾಯ .. .. .. | ೭೯ |
| ೯. | ಕಟುತೈಲ .. .. .. | ೮೧ |
| ೧೦. | ಮೆಣಸಿನಚೂರ್ಣ .. .. .. | ೮೧ |
| ೧೧. | ಹೆಗ್ಗುಳ್ಳದಕಷಾಯ .. .. .. | ೮೨ |
| ೧೨. | ತಾರೇಕಾಯಿಯ ಉಪಯೋಗ .. .. | ೮೨ |
| ೧೩. | ಶುಂಠ್ಯಾದಿಕಷಾಯ .. .. .. | ೮೨ |
| ೧೪. | ಶುಂಠ್ಯಾದಿಚೂರ್ಣ .. .. .. | ೮೩ |
| ೧೫. | ತ್ರಿಕಟುಚೂರ್ಣ .. .. .. | ೮೩ |
| ೧೬. | ಹಸೀಶುಂಠೀರಸಪ್ರಯೋಗ .. .. .. | ೮೪ |
| ೧೭. | ವಾಸಾಕಷಾಯ .. .. .. | ೮೪ |
| ೧೮. | ಆಡುಸೋಗೇಕಷಾಯ .. .. .. | ೮೫ |


## ಅಥಾಮವಾತಚಿಕಿತ್ಸಾ.


| | | |
|---|---|---|
| ೧. | ಹರಳು. Riccinus Communis. ಏರಂಡ: .. | ೮೬—೮೭ |
| ೨. | ರಾಸ್ನಾದಿಕಷಾಯ .. ... .. | ೮೮ |


## ಅಥ ನೇತ್ರರೋಗಚಿಕಿತ್ಸಾ.


| | | |
|---|---|---|
| ೧. | ಕುಳುತ್ಥ (ಹುರುಳಿ) ಯೋಗ .. .. | ೮೮ |
| ೨. | ಶಿಗ್ರುಪಲ್ಲವರಸ .. .. .. | ೮೯ |
| ೩. | ಶಿಗ್ರು (ನುಗ್ಗೆ) ಪಲ್ಲವರಸ .. .. .. | ೯೦ |

| ವಿಷಯ | | ಪುಟಸಂಖ್ಯೆ |
|---|---|---|
| ೪. | ಸಮುದ್ರಫೇನಚೂರ್ಣ | ೯೦ |
| ೫. | ಹಿಪ್ಪಲೀಚೂರ್ಣ | ೯೧ |
| ೬. | ಮಾಕ್ಷಿಕಪ್ರಯೋಗ | ೯೧ |
| ೭. | ತ್ರಿಫಲಾಚೂರ್ಣ | ೯೨ |
| | **ಅಥ ಕಾಮಿಲಾಚಿಕಿತ್ಸಾ.** | |
| ೧. | ದೇವದಾಳೀಹಣ್ಣಿನ ರಸದ ನಸ್ಯ | ೯೩ |
| ೨. | ತ್ರಿಫಲಾದಿಕ್ವಾಥ—ತ್ರಿಫಲಾಕಷಾಯ | ೯೩ |
| ೩. | ಅಂಜನ | ೯೪ |
| ೪. | ಗೋದುಗ್ಧಪ್ರಯೋಗ | ೯೪ |
| | **ಅಥ ಪ್ರದರಾದಿಚಿಕಿತ್ಸಾ.** | |
| ೧. | ಪಿಚುಮಂದಾದಿವಟಿ | ೯೫ |
| ೨. | ಉತ್ತರಣೆಯಚೂರ್ಣ | ೯೫ |
| ೩. | ಉತ್ತರಣೆ. Achyranthes Aspera. अपामार्गः | ೯೫—೯೭ |
| | **ಸ್ತನ್ಯದೋಷಚಿಕಿತ್ಸಾ.** | |
| ೧. | ಗೋಪ್ಯಾದಿಕಷಾಯ | ೯೭ |
| | **ಪ್ರದರರೋಗಚಿಕಿತ್ಸಾ.** | |
| ೧. | ಮರದರಿಸಿನದ ಕಷಾಯ | ೯೮ |
| ೨ | ಕಿರುಕುಸಾಲೆ ಮತ್ತು ರಸಾಂಜನಗಳ ಉಪಯೋಗ | ೯೯ |
| | **ಅಥಾರ್ತವನಿರೋಧಚಿಕಿತ್ಸಾ.** | |
| ೧. | ಕಹಿಮುಕ್ಕೆಯ ಪ್ರಯೋಜನವು | ೯೯ |
| | ಅಥ ಗರ್ಭಿಣೀ ಸೂತಿಕಾ ಚಿಕಿತ್ಸಾ | ೧೦೦ |
| | **ಕ್ಷಯಚಿಕಿತ್ಸಾ.** | |
| ೧. | ಆಡುಸೋಗೇಪ್ರಯೋಗ | ೧೦೨ |
| ೨. | ಆಡುಸೋಗೆ. Adhatoda Vasica, Justica Adhatoda. वासकः | ೧೦೩ |

ವಿಷಯ | ಅಥ ವ್ರಣಚಿಕಿತ್ಸಾ. | ಪುಟಸಂಖ್ಯೆ

೧. ಗುಗ್ಗುಳಯುಕ್ತ ತ್ರಿಫಲಾಕಷಾಯವು .. .. ೧೦೫

ಅಥ ಮೇದೋವೃದ್ಧಿಚಿಕಿತ್ಸಾ.

೧. ಮಧ್ವಂಬುಪ್ರಯೋಗ .. .. .. ೧೦೬

ಅಥ ಕ್ರಿಮಿಚಿಕಿತ್ಸಾ.

೧. ತ್ರಿಕಟುತ್ರಿಫಲಾದಿಕಷಾಯ .. .. .. ೧೦೭

ಅಥ ಮುಖಪಾಕಚಿಕಿತ್ಸಾ.

೧. ಜಾತಿಪ್ರವಾಳ ತ್ರಿಫಲಾದಿಕಷಾಯ .. .. ೧೦೭

ಅಥ ಪ್ರಮೇಹಚಿಕಿತ್ಸಾ.

೧. ನೆಲ್ಲೀಕಾಯಿಕಷಾಯ .. .. .. ೧೦೮

೨. ಅಮೃತವಳ್ಳೀಕಷಾಯ .. .. .. ೧೦೮

ಅಥ ವಾತಪಿತ್ತಚಿಕಿತ್ಸಾ.

೧. ಹರಳೆಣ್ಣೆಯೊಡನೆ ಕೂಡಿದ ಅಮೃತವಳ್ಳೀಸ್ವರಸ .. ೧೦೯

೨. ಪಿಂಡತೈಲ ಮತ್ತು ಏರಂಡಾದಿಕಷಾಯ .. .. ೧೧೦

ಅಥ ವಿಷೂಚೀಚಿಕಿತ್ಸಾ.

೧. ಲಶುನಾದಿಚೂರ್ಣ .. .. .. ೧೧೦

ಅಥ ವಮನಾದಿಚಿಕಿತ್ಸಾ.

೧. ರುಗ್ಲಾಜಾದಿ (ಚಂಗಲುಕೋಷ್ಠ ಅರಳು) ವಟಿ
ಮತ್ತೂ ಏಲಾದಿಚೂರ್ಣ .. .. .. ೧೧೧

ಅಥ ದಾಹಚಿಕಿತ್ಸಾ. .. .. .. ೧೧೧

ಅಥ ಪಾಮಚಿಕಿತ್ಸಾ.

೧. ಪಾರದಾದಿಚೂರ್ಣ .. .. .. ೧೧೩

ಅಥಾರ್ಶಃಪ್ಲೀಹಚಿಕಿತ್ಸಾ.

೧. ಪಥ್ಯಾಮೋದಕವು .. .. .. ೧೧೪

ವಿಷಯ — ಪುಟಸಂಖ್ಯೆ

## ಅಥ ವಿಪಾದಿಕಾಚಿಕಿತ್ಸಾ.

(ಕಾಲುಬಿರಿಯುವಿಕೆ.)


೧. ಜೇನುಮೇಣ ಮತ್ತು ಸೈಂಧವಲವಣಾದಿಗಳ ಮುಲಾಮು .. ೧೧೪


## ಅಥಾಮ್ಲಪಿತ್ತಚಿಕಿತ್ಸಾ.


೧. ಭೂನಿಂಬಾದಿಕಷಾಯವು .. .. .. ೧೧೫


## ಅಥ ಗಂಡಮಾಲಾಚಿಕಿತ್ಸಾ.


೧. ಭಲ್ಲಾತಕಾದಿಲೇಪ .. .. .. ೧೧೫

೨. ಯಕ್ಕ. Calotropis Gigantea. अर्क:. ೧೧೬—೧೧೮

೩. ಹಿಂಗ್ವಾದಿಚೂರ್ಣಗದ್ಯ .. .. .. ೧೧೮


## ಅಥ ಕಂಠರೋಗಚಿಕಿತ್ಸಾ.


೧. ಕಳಿಂಗಕಾದಿಕ್ವಾಥ ಮತ್ತು ಪಾಠಾದಿಗುಟಿ .. ೧೧೯


## ಅಗ್ನಿಕಾರಿಯಾದ ಔಷಧ.


೧. ಹಸೀಶುಂಠೀರಸ ಮತ್ತು ಬೇವಿನರಸಗಳೊಡನೆ ಕೂಡಿದ ಸೈಂಧವಲವಣ .. .. .. ೧೨೦

೨. ಹಿಂಗ್ವಾಷ್ಟಕ ಮತ್ತು ವೃಕ್ಷಾಮ್ಲಾದಿ ಚೂರ್ಣಗಳು .. ೧೨೧

೩. ಶುಂಠ್ಯಾದಿಚೂರ್ಣ .. .. .. ೧೨೨

೪. ಸೈಂಧವಲವಣ ಮತ್ತು ಬೇವಿನರಸಗಳೊಡನೆ ಸೇರಿದ ಹಸೀಶುಂಠಿಯರಸ .. .. ೧೨೩


## ಅಥಾಂತರ್ವಿದ್ರಧಿಚಿಕಿತ್ಸಾ.


೧. ಶಿಗ್ರುಪೇಸ್ತ್ಯಾದಿಕಷಾಯ .. .. .. ೧೨೩


## ಅಥ ಹೃದಯರೋಗಚಿಕಿತ್ಸಾ.


೧. ಅರ್ಜುನಘೃತ .. .. .. ೧೨೪

೨. ಮತ್ತಿ. Terminalia Arjuna. अर्ज्जुन:. ೧೨೪—೧೨೭

## ಅಥ ದಂತರೋಗಚಿಕಿತ್ಸಾ.


ವಿಷಯ                                                    ಪುಟಸಂಖ್ಯೆ

೧. ಬಕುಳವೃಕ್ಷದಪಟ್ಟೆ .. .. .. ೧೨೭


## ಅಥ ರಕ್ತಪಿತ್ತಚಿಕಿತ್ಸಾ.


೧. ಆಡುಸೋಗೆ .. .. .. ೧೨೮


## ಅಥ ಹಿಧ್ಮಾಚಿಕಿತ್ಸಾ.


೧. ಶುಂಠ್ಯಾದಿಚೂರ್ಣ .. .. .. ೧೨೯


## ಅಥ ಭ್ರಮುಚಿಕಿತ್ಸಾ.


೧. ದುರಾಲಭಾಕಷಾಯ .. .. .. ೧೨೯


## ಅಥ ಶೋಕಚಿಕಿತ್ಸಾ.


೧. ಮದ್ಯಸೇವನೆ .. .. .. ೧೩೦


## ಅಥೋರುಸ್ತಂಭಚಿಕಿತ್ಸಾ.


೧. ದಶಮೂಲಸಹಿತವಾದ ಪುನರ್ನವಾದಿಕಷಾಯ .. ೧೩೧


## ಅಥ ಮೂತ್ರಕೃಛ್ರಚಿಕಿತ್ಸಾ.


೧. ಕುಶಕಾಶಾದಿ ಮತ್ತು ಏಲಾದಿ ಚೂರ್ಣಗಳು .. .. ೧೩೧


## ಅಥ ಮೂತ್ರಾಘಾತಾಶ್ಮರೀ ಶರ್ಕರಾಚಿಕಿತ್ಸಾ.


೧. ವಾಸಾದಿ ಮತ್ತು ಅಶ್ಮಭಿಚ್ಛೀತಕ್ಯಾದಿ ಕಷಾಯಗಳು .. ೧೩೨


## ಅಥ ವ್ಯಂಗಚಿಕಿತ್ಸಾ.


೧. ನ್ಯಗ್ರೋಧಾದಿಲೇಪ .. .. .. ೧೩೩
೨. ಇಂಗುಳದಹಣ್ಣಿನ ಮತ್ತು ರೋಧ್ರಾದಿ ಲೇಪಗಳು .. ೧೩೪


## ಅಥ ಶೋಫಚಿಕಿತ್ಸಾ.


೧. ರಾಸ್ನಾತೈಲ ಮತ್ತು ಶುಂಠ್ಯಾದಿಚೂರ್ಣ ಪ್ರಯೋಗಗಳು .. ೧೩೫
೨. ಕೊಮ್ಮೆ. Boehaavia Diffusa. पुनर्नवा. ೧೩೫—೧೩೮

## ಅಥ ಕರ್ಣಶಿರಃ ಶೂಲಚಿಕಿತ್ಸಾ.


| ವಿಷಯ | | ಪುಟಸಂಖ್ಯೆ |
|---|---|---|
| ೧. | ಪಾಠಾದಿಲೇಪ ಮತ್ತು ಎಕ್ಕದೆಲೆಯ ರಸಪ್ರಯೋಗ .. | ೧೩೮ |
| ೨. | ನುಗ್ಗೆ. Moringa Pterygosperma. शिग्रुः. | ೧೩೯—೧೪೧ |


## ಅಥ ವಾತರೋಗಚಿಕಿತ್ಸಾ.


| | | |
|---|---|---|
| ೧. | ಲಘುರಾಜಮೃಗಾಂಕ .. .. .. | ೧೪೧ |


## ಅಥ ಪಿತ್ತಚಿಕಿತ್ಸಾ.


| | | |
|---|---|---|
| ೧. | ಅಮೃತವಳ್ಳಿಸ್ವರಸವು .. .. .. | ೧೪೨ |


## ಅಥ ಶ್ಲೇಷ್ಮಚಿಕಿತ್ಸಾ.


| | | |
|---|---|---|
| ೧. | ಅಮೃತವಳ್ಳಿಕಷಾಯ .. .. .. | ೧೪೩ |


## ಅಥ ವೃಷ್ಯಚಿಕಿತ್ಸಾ.


| | | |
|---|---|---|
| ೧. | ಕಾಮಜನಕವಾದ ವಿವಿಧೋಪಚಾರಗಳು .. .. | ೧೪೪ |
| ೨. | ಅತಿಮಧುರದಚೂರ್ಣ .. .. .. | ೧೪೪ |
| ೩. | ಮಧುಯಷ್ಟಿಕಣಾದಿಚೂರ್ಣ .. .. .. | ೧೪೪ |
| ೪. | ಅಮೃತಾಮಲಕಾದಿಚೂರ್ಣ .. .. | ೧೪೫ |
| ೫. | ಉಚ್ಚಟಾ (ಭದ್ರಮುಸ್ತೇದಿ) ಚೂರ್ಣ .. .. | ೧೪೫ |
| ೬. | ಭದ್ರಮುಸ್ತೆಯ ಸೇವನೆ .. .. .. | ೧೪೬ |
| ೭. | ನೆಲಗುಂಬಳದಗೆಡ್ಡೆಯಚೂರ್ಣ .. .. | ೧೪೭ |
| ೮. | ಸಕ್ಕರೆ ತುಪ್ಪಗಳೊಡನೆ ಹಾಲಿನ ಪ್ರಯೋಗ .. | ೧೪೮ |
| ೯. | ವಿಶ್ವತಾಪಹರಣರಸವು .. .. .. | ೧೪೮ |
| ೧೦. | ಶೀತಾರಿರಸವು .. .. .. | ೧೪೯ |
| ೧೧. | ಕನಕಸುಂದರರಸ .. .. .. | ೧೫೦ |
| ೧೨. | ಲೋಹಾದಿರಸ .. .. .. | ೧೫೧ |
| ೧೩. | ಬಾಳೆ. Musa Sapientum. कदली. | ೧೫೨—೧೫೬ |
| ೧೪. | ಆದಿತ್ಯಘುಟಿಕಾರಸ .. .. .. | ೧೫೬ |

| ವಿಷಯ | | ಪುಟಸಂಖ್ಯೆ |
|---|---|---|
| ೧೫. | ಲಕ್ಕೀ. Vitex Negundo & Vitex Trifolia. निर्गण्डी, सिन्दुवार:. | ೧೫೭—೧೫೯ |
| ೧೬. | ವಿಲಾಸಿನೀವಲ್ಲಭರಸ .. .. .. | ೧೫೯ |
| ೧೭. | ನಾರಾಯಣಚೂರ್ಣ .. .. .. | ೧೬೨ |
| ೧೮. | ನಾರಾಯಣತೈಲ .. .. .. | ೧೬೩ |
| ೧೯. | ರಸಶುದ್ಧಿಕ್ರಮ .. .. .. | ೧೬೫ |
| ೨೦. | ಗಂಧಕಶೋಧನ .. .. .. | ೧೬೫ |
| ೨೧. | ಅಭ್ರಕಶುದ್ಧಿ .. .. .. | ೧೬೬ |
| ೨೨. | ತಾಮ್ರಶುದ್ಧಿ .. .. .. | ೧೬೬ |
| ೨೩. | ಲೋಹಶುದ್ಧಿ .. .. .. | ೧೬೬ |
| ೨೪. | ತಾಳಕಶುದ್ಧಿ .. .. .. | ೧೬೬ |
| ೨೫. | ಮನಶ್ಶಿಲಾಶುದ್ಧಿ .. .. .. | ೧೬೭ |
| ೨೬. | ಕಪ್ಪುರೀಶುದ್ಧಿ .. .. .. | ೧೬೭ |
| ೨೭. | ಮೈಲತುತ್ತಶುದ್ಧಿ .. .. .. | ೧೬೭ |
| ೨೮. | ವಿಮಳಿಶುದ್ಧಿ .. .. .. | ೧೬೭ |
| ೨೯. | ಮಾಕ್ಷಿಕಶುದ್ಧಿ .. .. .. | ೧೬೮ |
| ೩೦. | ಇಂಗಲೀಕಶುದ್ಧಿ .. .. .. | ೧೬೮ |
| ೩೧. | ಜಾಪಾಳಶೋಧನೆ .. .. .. | ೧೬೮ |
| ೩೨. | ಬಿಳಿಗಾರಶುದ್ಧಿ .. .. .. | ೧೬೮ |
| ೩೩. | ವತ್ಸನಾಭಿಶುದ್ಧಿ .. .. .. | ೧೬೯ |
| ೩೪. | ಶಿಲಾಜತುಶುದ್ಧಿ .. .. .. | ೧೬೯ |
| ೩೫. | ಕಾಸೀಸಶುದ್ಧಿ .. .. .. | ೧೬೯ |
| ೩೬. | ರಸಭಸ್ಮ .. .. .. | ೧೬೯ |
| ೩೭. | ಸುವರ್ಣಭಸ್ಮ .. .. .. | ೧೬೯ |
| ೩೮. | ಲೋಹಭಸ್ಮ .. .. .. | ೧೭೦ |
| ೩೯. | ಅಭ್ರಕಭಸ್ಮ .. .. .. | ೧೭೦ |
| ೪೦. | ತಾಮ್ರಭಸ್ಮ .. .. .. | ೧೭೧ |

## ಪರಿಶಿಷ್ಟ (ಔಷಧರಚನೆ).


| ವಿಷಯ | | ಪುಟಸಂ॥ |
|---|---|---|
| ೧. | ಕಷಾಯವು | ೧೭೩ |
| ೨. | ಕಲ್ಕ | ೧೭೫ |
| ೩. | ಚೂರ್ಣ | ೧೭೫ |
| ೪ | ವಟಕ | ೧೭೬ |
| ೫. | ಲೇಹ್ಯವು | ೧೭೭ |
| ೬. | ಸ್ನೇಹಪಾಕವಿಧಿ (ತೈಲಘೃತಾದಿಗಳು) | ೧೭೭ |
| ೭. | ಆಸವಾರಿಷ್ಟಗಳು | ೧೮೦ |
| ೮. | ಮಾನಪರಿಭಾಷೆ—ಕೋಷ್ಟಕಗಳು | ೧೮೧ |
| ೯. | ಮಕ್ಕಳಿಗೆ ಔಷಧವನ್ನು ಕೊಡಬೇಕಾದ ಪ್ರಮಾಣ | ೧೮೪ |


## ಸಂಕೇತಪದಗಳು.


| | | |
|---|---|---|
| ೧. | ತ್ರಿಕಟು, ತ್ರ್ಯೂಷಣ, ವ್ಯೋಷ | ೧೮೫ |
| ೨. | ಪಂಚಕೋಲ | ೧೮೫ |
| ೩. | ತ್ರಿಫಲಾ | ೧೮೫ |
| ೪. | ತ್ರಿಜಾತಕ | ೧೮೫ |
| ೫. | ಚಾತುರ್ಜಾತಕ | ೧೮೫ |
| ೬. | ಲಘುಪಂಚಮೂಲ | ೧೮೫ |
| ೭. | ಮಹತ್ಪಂಚಮೂಲ | ೧೮೫ |
| ೮. | ದಶಮೂಲ | ೧೮೬ |
| ೯. | ಮಧ್ಯಮಪಂಚಮೂಲ | ೧೮೬ |
| ೧೦. | ಆಮ್ಲಪಂಚಕ | ೧೮೬ |
| ೧೧. | ಪಂಚಸುಗಂಧ | ೧೮೬ |
| ೧೨. | ತ್ರಿಕ್ಷಾರಗಳು | ೧೮೬ |
| ೧೩. | ಪಂಚಲವಣಗಳು | ೧೮೬ |
| ೧೪. | ಅಷ್ಟಮೂತ್ರಗಳು | ೧೮೬ |

# ದ್ರವ್ಯಶುದ್ಧಿ.


| ವಿಷಯ | | ಪುಟಸಂಖ್ಯೆ |
|---|---|---|
| ೧. | ಕಂಪಿಲ್ಲ | ೧೮೭ |
| ೨. | ಬೋಳ | ೧೮೭ |
| ೩. | ಮಸ್ತಕೀ | ೧೮೭ |
| ೪. | ಕಫರೀ | ೧೮೭ |
| ೫. | ಸರ್ಜಕ್ಷಾರ | ೧೮೭ |
| ೬. | ಯುವಕ್ಷಾರ | ೧೮೭ |
| ೭. | ಪಂಚಲವಣಗಳು | ೧೮೭ |
| ೮. | ತ್ರಿಕಟುಕ | ೧೮೭ |
| ೯. | ಗಜಪಿಪ್ಪಲೀ | ೧೮೮ |
| ೧೦. | ಕರೀಮದ್ದು | ೧೮೮ |
| ೧೧. | ಇಂಗು | ೧೮೮ |
| ೧೨. | ಜೀರಿಗೆ | ೧೮೮ |
| ೧೩. | ಹರಳುಬೀಜ, ನೆಲದಂತೀಬೀಜ | ೧೮೮ |
| ೧೪. | ನಾಭೀಗೆಡ್ಡೆ | ೧೮೮ |
| ೧೫. | ಉಮ್ಮತ್ತೀಬೀಜ | ೧೮೮ |
| ೧೬. | ಚಿತ್ರಮೂಲ | ೧೮೮ |
| ೧೭. | ಲೋಳಿಸರ | ೧೮೮ |
| | ಪ್ರತಿನಿಧಿದ್ರವ್ಯಗಳು | ೧೮೯—೧೯೩ |
| | ಅನುಪಾನಗಳು | ೧೯೪—೧೯೭ |

|| ಶ್ರೀರಸ್ತು ||

ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ
ವೈದ್ಯಶಾಸ್ತ್ರ ಪ್ರಧಾನಾಧ್ಯಾಪಕರೂ ಆಸ್ಥಾನ ವಿದ್ವಾಂಸರೂ ಆಗಿ
ಕೀರ್ತಿಶೇಷರಾದ

# ಶ್ರೀಪುಟ್ಟಸ್ವಾಮಿ ಪಂಡಿತರವರ

## ವ್ಯಾಖ್ಯಾನಪೀಠಿಕೆ

---

ವಿಘ್ನವ್ಯೂಹಾಃ ಪ್ರಶಮಂ । ಪ್ರಯಾಂತಿಯತ್ಪಾದಾಂಘ್ರಿಪಂಕಜಸ್ಮರಣಾತ್ ॥
ತಂವಂದೇ ಗಿರಿಜಾಯಾಃ । ಪ್ರೀತಿತನೂಜಂಭುಜಂಗಕೃತಭೂಷಂ ॥ ೧ ॥

ಭರದ್ವಾಜಕುಲಕ್ಷೀರಸರಿತ್ಪತಿ ನಿಶಾಪತೇಃ ।
ವೆಂಕಟಾದ್ರೇಸ್ತನೂಜೇನ ಪುಟ್ಟಸ್ವಾಮ್ಯೈಯ್ಯಸೂರಿಣಾ ॥ ೨ ॥

ಆಯುರ್ವೇದಾರ್ಥತತ್ವಜ್ಞೈ ರಾತ್ರೇಯಾದಿತಪಸ್ವಿಭಿಃ ।
ಕೃತಾನ್ಗ್ರಂಥಾನ್ಸಮಾಲೋಚ್ಯ ಬಾಲಾನಾಂಸುಖಬುದ್ಧಯೇ ॥ ೩ ॥

ಲೋಲಂಬರಾಜಕವಿನಾ ಯತ್ಕೃತಂ ವೈದ್ಯಜೀವನಂ ।
ಕರ್ಣಾಟಭಾಷಯಾಸಮ್ಯಗ್ವಿವೃತಿಸ್ತಸ್ಯವಕ್ಷ್ಯತೇ ॥ ೪ ॥

ಅಯ್ಯಾ,—ಈ ಕಾಲದಲ್ಲಿ ಕೆಲವರು ನಮ್ಮ ವೈದ್ಯಶಾಸ್ತ್ರವಂ ಪ್ರಮಾಣಾದಿಗಳಿಲ್ಲವೆಂದು ದೂಷಿಸುತಲಿದಾರೆ. ಆದಕಾರಣ ಅವರ ಬುದ್ಧಿ ಚಾಪಲ್ಯ ನಿವಾರಣಾರ್ಥವಾಗಿ, ಬಾಹಟ ಶಾರ್ಙ್ಗಧರಾದಿ ಗ್ರಂಥಗಳಲ್ಲಿ ಹೇಳಲ್ಪಟ್ಟಿರುವ ಕೆಲವು ವಿಷಯಗಳು ಸಪ್ರಮಾಣವಾಗಿ ಇದರ ಕೆಳಗೆ ಬರೆಯಲ್ಪಡುವವು.

ಅವಾವವೆಂದರೆ :—

ಎಲ್ಲಾ ಔಷಧ ಪ್ರಯೋಗಗಳಲ್ಲಿಯೂ, ಹೊಸದಾಗಿತಂದು ಒಣಗಿಸಿದ ಪದಾರ್ಥಗಳನ್ನೇ ಉಪಯೋಗಿಸಿಕೊಳ್ಳಬೇಕು. ಅನುಕೂಲವಾಗದ ಪಕ್ಷದಲ್ಲಿ

ಹಸೀಪದಾರ್ಥಗಳಂ ಒಣಗಿದ ಪದಾರ್ಥಗಳೆರಡರಷ್ಟು ಉಪಯೋಗಿಸಿ ಕೊಳ್ಳಬೇಕು.

(ಪ್ರಮಾಣಶ್ಲೋಕವು)

ಶುಷ್ಕಂನವೀನದ್ರವ್ಯಂಚಯೋಜ್ಯಂಸಕಲಕರ್ಮಸು ।
ಆರ್ದ್ರಂಚದ್ವಿಗುಣಂಯುಂಜ್ಯಾದೇಷಸರ್ವತ್ರನಿಶ್ಚಯಃ ॥

ಆದರೆ ಅಮೃತವಳ್ಳಿ, ಕೊಡಸಿಗೆ, ಆಡುಸೋಗೆ, ಬೂದಿಗುಂಬಳ, ಆಷಾಢಿ, ಹಿರೀಮದ್ದು, ಮುಳ್ಳುಗೋರಟೆ, ಸಬ್ಬಸೀಗೆ, ಕಳ್ಳನಚೌರಿ ಈ ಪದಾರ್ಥಗಳನ್ನು ಹಸಿದಾಗಿಯೇ ಪ್ರಯೋಗಿಸಬೇಕು. ಹಾಗಾದಾಗ್ಯೂ ದ್ವಿಗುಣವಾಗಿ ಪ್ರಯೋಗಿಸಬಾರದು.

ಗುಳೂಚೀಕುಟಜೋವಾಶಾ ಕೂಶ್ಮಾಂಡಶ್ಚಶತಾವರೀ ।
ಅಶ್ವಗಂಧಾಸಹಚರೀ ಶತಪುಷ್ಪಾಪ್ರಸಾರಿಣೀ ।
ಪ್ರಯೋಕ್ತವ್ಯಾಸ್ಸದೈವಾರ್ದ್ರಾಃದ್ವಿಗುಣಂನೈವಯೋಜಯೇತ್ ॥

ಯಾವ ಪದಾರ್ಥಗಳ ಬೇರುಗಳು ಅತ್ಯಂತ ದಪ್ಪವಾಗಿರುವವೋ ಅವುಗಳ ಪಟ್ಟೆಯನ್ನುಪಯೋಗಿಸಿಕೊಳ್ಳಬೇಕು. ಯಾವುಗಳ ಬೇರುಗಳು ಸಣ್ಣನಾಗಿರುವವೋ, ಅವುಗಳನ್ನು ಸಮೂಲವಾಗಿ ಉಪಯೋಗಿಸಿಕೊಳ್ಳ ಬೇಕು.

ಅತಿಸ್ಥೂಲಜಟಾಯಾಸ್ಸ್ಯುಸ್ತಾಸಾಂಗ್ರಾಹ್ಯಾಸ್ತ್ವಚೋಬುಧೈಃ ।
ಗೃಹ್ಣೀಯಾತ್ಸೂಕ್ಷ್ಮಮೂಲಾನಿ ಸಕಲಾನ್ಯಪಿಬುದ್ಧಿಮಾನ್ ॥

ಆದರೆ ಆಲಮೊದಲಾದವುಗಳ ಚಕ್ಕೆಗಳನ್ನೂ, ತ್ರಿಫಲೆ ಮೊದಲಾದವುಗಳ ಫಲವನ್ನೂ, ಮಾದಳ ಮುಂತಾದವುಗಳ ಸಾರವನ್ನೂ, ಧಾತಕಿ ಮೊದಲಾದವುಗಳ ಕುಸುಮವನ್ನೂ, ಕಳ್ಳಿ ಮುಂತಾದವುಗಳ ಹಾಲನ್ನೂ, ತಾಳೀಸ ಮೊದಲಾದವುಗಳ ಎಲೆಗಳನ್ನೂ ಗ್ರಹಿಸಬೇಕು.

ನ್ಯಗ್ರೋಧಾದೇಸ್ತ್ವಚೋಗ್ರಾಹ್ಯಾ ಸ್ಸಾರಂಸ್ಯಾದ್ಬೀಜಕಾದಿತಃ ॥
ಧಾತಕ್ಯಾದೇಶ್ಚಪುಷ್ಪಾಣಿ ಸ್ನುಹ್ಯಾದೇಃಕ್ಷೀರಮಾಹರೇತ್ ॥
ತಾಳೀಸಾದೇಶ್ಚಪತ್ರಾಣಿ ಫಲಂಸ್ಯಾತ್ತ್ರಿಫಲಾದಿತಃ ॥

ನೀರಿನ ಪ್ರಮಾಣ ಹೇಳದೇ ಇರತಕ್ಕ ಸ್ಥಳದಲ್ಲಿ ದ್ರವ್ಯಕ್ಕಿಂತ ಹದಿನಾರು ಭಾಗ ಹೆಚ್ಚಾಗಿಹಾಕಬೇಕು. ಎಂಟರಲ್ಲಿ ಒಂದುಭಾಗ ಇಳಿಸಿಕೊಳ್ಳಬೇಕು. ಕೆಲವು ದ್ರವ್ಯಂಗಳ್ಗೆ ಪ್ರಮಾಣವಂ ಹೇಳದಿರತಕ್ಕ ಸ್ಥಳದಲ್ಲಿ ಆ ದ್ರವ್ಯಂಗಳಂ ಪ್ರತ್ಯೇಕ ಮೂರು ಮೂರು ರೂಪಾಯಿ ತೂಕವಂ ಹಾಕಬೇಕು. ಕಾಲವಂ ಹೇಳದಿರತಕ್ಕ ಸ್ಥಳದಲ್ಲಿ ಪ್ರಾತಃ ಕಾಲವಂ ಗ್ರಹಿಸಿಕೊಳ್ಳಬೇಕು. ಪಾತ್ರೆಯಂ ಹೇಳದಿರತಕ್ಕ ಸ್ಥಳದಲ್ಲಿ ಮಡಿಕೆ ಎಂಬದಾಗಿ ತಿಳಿಯಬೇಕು. ಪತ್ರ ಪುಷ್ಪ ಮೊದಲಾದ ಅಂಗಗಳಲ್ಲಿ ಇಂಥಾ ಅಂಗವೆಂದು ವಿವೇಚನೆ ಮಾಡದಿದ್ದ ಸ್ಥಳದಲ್ಲಿ ಬೇರನ್ನು ಸ್ವೀಕರಿಸಿಕೊಳ್ಳಬೇಕು. ಒಂದು ಪದಾರ್ಥಕ್ಕೂ ಪ್ರಮಾಣವಂ ಹೇಳದಿರುವ ಸ್ಥಳದಲ್ಲಿ ಸಮತೂಕವೆಂದು ತಿಳಿದುಕೊಳ್ಳಬೇಕು. (ಎಂದರೆ) ಹಿಂದೆ ಹೇಳಿದಮೇರೆ ಎಲ್ಲಾ ದ್ರವ್ಯಗಳನ್ನೂ ಮೂರು ಮೂರು ರೂಪಾಯಿ ತೂಕ ಪ್ರಯೋಗಿಸಬೇಕೆಂದು ಅರಿಯಬೇಕು.

ಪಾನೀಯಂಷೋಡಶಗುಣಂ ಕ್ಷುಣ್ಣೇದ್ರವ್ಯಪಲೇಕ್ಷಿಪೇತ್ ।
ಮೃತ್ಪಾತ್ರೇಕ್ವಾಥಯೇದ್ಗ್ರಾಹ್ಯ ಮಷ್ಟಮಾಂಶಾವಶೇಷಿತಂ ॥
ಕಾಲೇನುಕ್ತೇಪ್ರಭಾತಂಸ್ಯಾ ದಂಗೇನುಕ್ತೇಜಟಾಭವೇತ್ ।
ಭಾಗೇನುಕ್ತೇತುಸಾಮ್ಯಂಸ್ಯಾತ್ಪಾತ್ರೇನುಕ್ತೇತುಮೃಣ್ಮಯಂ ॥

ಮೂವತ್ತು ವರ್ಷ ವಯಸ್ಸುಳ್ಳ ಹತ್ತುಜನರಿಗೆ ಘೋಟಾಚೂಳಿಯನ್ನು ಪ್ರತ್ಯೇಕವಾಗಿ ಒಂದೊಂದು ಕೊಟ್ಟರೆ ಒಬ್ಬನಿಗೆ ಒಂದಾವರ್ತಿ ವಿರೇಚನವಾಗುವದು. ಮತ್ತೊಬ್ಬನಿಗೆ ಆಗುವದೇಯಿಲ್ಲ. ಇನ್ನೊಬ್ಬನಿಗೆ ಮೂರಾವರ್ತಿ ಆಗುವದು. ಬೇರೊಬ್ಬನಿಗೆ ನಾಲ್ಕು ಮಾತ್ರೆಗಳನ್ನು ಕೊಟ್ಟಾಗ್ಯೂ ಒಂದಾವರ್ತಿಯೂ ಆಗುವದಿಲ್ಲ. ಆದ್ದರಿಂದ ರೋಗಸ್ವರೂಪವನ್ನೂ, ಮೃದುಮಧ್ಯಕ್ರೂರ ಕೋಷ್ಠಗಳ ವಿವೇಚನೆಯನ್ನೂ, ವರ್ಷಾಶರದ್ವಸಂತಾದಿ ಕಾಲಭೇದವನ್ನೂ, ಜಾಂಗಲಾದಿ ದೇಶಭೇದವನ್ನೂ, ಬಾಲ್ಯಾದಿ ವಯಸ್ಸನ್ನೂ, ರೋಗಿಗಳ ಶಕ್ತಿಯನ್ನೂ ನೋಡಿ, ಬುದ್ಧಿಶಕ್ತಿಯಿಂದ ಔಷಧಕ್ಕೆ ಪ್ರಮಾಣವನ್ನು ಕಲ್ಪಿಸಬೇಕು.

ಮಾತ್ರಾಯಾನವ್ಯವಸ್ಥಾಸ್ತಿ ವ್ಯಾಧಿಂ ಕೋಷ್ಠಂ ಬಲಂ ವಯಃ ।
ಆಲೋಚ್ಯದೇಶಕಾಲೌಚ ಯೋಜ್ಯಾತದ್ವಚ್ಚ ಕಲ್ಪನಾ ॥
ದೇಶಕಾಲವಯೋವಹ್ನಿ ಸಾತ್ಮ್ಯ ಪ್ರಕೃತಿಭೇಷಜಂ ।
ದೇಹಂ ಸತ್ವಂ ಬಲಂ ವ್ಯಾಧಿಂ ದೃಷ್ಟ್ವಾ ಮಾತ್ರಾಂ ಪ್ರಯೋಜಯೇತ್ ॥
ಸ್ಥಿತಿರ್ನಾಸ್ತ್ಯೇವಮಾತ್ರಾಯಾಃ ಕಾಲಮಗ್ನಿಂ ಬಲಂ ವಯಃ ।
ಪ್ರಕೃತಿಂ ದೋಷದೇಶೌಚ ದೃಷ್ಟ್ವಾ ಮಾತ್ರಾಂ ಪ್ರಯೋಜಯೇತ್ ॥

ಈ ಪ್ರಕಾರವಾಗಿ ನಮ್ಮ ಶಾಸ್ತ್ರದಲ್ಲಿ ಇತರರ ಆಕ್ಷೇಪಕ್ಕೆ ಅವಕಾಶವಿಲ್ಲದಂತೆ ಎಲ್ಲಾ ಭಾಗದಲ್ಲಿಯೂ ಪ್ರಮಾಣಗಳು ಘಂಟಾಘೋಷವಾಗಿದ್ದಾಗ್ಯೂ, ಅವುಗಳನ್ನು ಪರಿಶೋಧಿಸದೆ, ನಮ್ಮ ವೈದ್ಯಶಾಸ್ತ್ರವನ್ನು ಪ್ರಮಾಣರಹಿತವಾದದ್ದೆಂದು ನಿಂದಿಸುವವರ ಮತದಲ್ಲಿ ಇರತಕ್ಕ ಪ್ರಮಾಣದೋಷಗಳನ್ನು ವಿವರಿಸುತ್ತೇನೆ. (ಅವಾವವೆಂದರೆ) ಒಂದೆಲಗನ ಸೊಪ್ಪಿನ ಪುಡಿಯನ್ನು ಸುಮಾರು ೫ ಯವೆತೂಕ ಮೊದಲು ೮ ಯವೆತೂಕ ಪರಿಯಂತ ಸೇವಿಸಿದರೆ ಕುಷ್ಠಾದ್ಯನೇಕ ಜಾಡ್ಯಗಳು ಪರಿಹಾರವಾಗುವವೆಂಬದಾಗಿಯೂ, ಗಜ್ಜುಗದ ತಿರಳನ್ನು ಸುಮಾರು ೧೫ ಯವೆತೂಕ ಸೇವಿಸಿದರೆ ಶೀತಜ್ವರ ಹೋಗುವದೆಂಬದಾಗಿಯೂ, ಮಾವಿನಬೀಜದ ಬೇಳೆಯನ್ನು ಒಣಗಿಸಿ ಪುಡಿಮಾಡಿ, ಅದನ್ನು ಸುಮಾರು ೨೦ ಯವೆತೂಕ ಮೊದಲು ೩೦ ಯವೆತೂಕದಮಟ್ಟಿಗೂ ಜೇನಿನಲ್ಲಾಗಲೀ, ಬೆಲ್ಲದಲ್ಲಾಗಲೀ, ಸೇರಿಸಿ ಕೊಟ್ಟರೆ ಹೊಟ್ಟೆಯಲ್ಲಿರುವ ಜಂತುಗಳು ಹೋಗುವವೆಂಬದಾಗಿಯೂ ಹೇಳಿದೆ. ಬೇಕಾದವರು ಇದನ್ನು ಪರೀಕ್ಷಿಸಿದರೆ, ಆ ಮಾತು ಸುಳ್ಳು ನಿಜ ವೆಂಬುವದು ಸ್ಪಷ್ಟವಾಗುತ್ತೆ. ಆ ಮತದವರಂ ಕೇಳಿದರೆ ಈ ಔಷಧಸೇವನೆಯಿಂದ ಕುಷ್ಠಾದಿ ಜಾಡ್ಯಗಳು ನಾಶವಾಗ್ಯುವದಕ್ಕೆ ಪ್ರತಿಬಂಧಕವಾದ ಒಂದು ವಿಲಕ್ಷಣ ಪ್ರಕೃತಿಯುಂಟು, ಅಂಥವರಿಗೆ ಈ ಔಷಧದಿಂದೇನೂ ಪ್ರಯೋಜನವಿಲ್ಲವೆಂದು ಕುಕಲ್ಪನೆಯಿಂದ ದುರುತ್ತರವಂ ಹೇಳುತ್ತಾರೆ. ಆ ದುರುತ್ತರದಿಂದಲೇ ಅವರ ಔಷಧಪ್ರಮಾಣವಂ ಸುಳ್ಳೆಂದು ನಿಶ್ಚೈಸಬಹುದು. ನಮ್ಮ ಮತದಲ್ಲಿರುವ ಕೆಲವು ಮೂಢರಾದ ವೈದ್ಯರು ಅಜ್ಞರಾದ ರೋಗಿಗಳ ಮುಂದೆ (ಅಥವಾ)

ಅಸಂಸ್ಕಾರಿಗಳಾಗಿಯೂ, ಮತ್ತೊಂದು ವಿದ್ಯದಲ್ಲಿ ಬುದ್ಧಿವಂತರಾಗಿಯೂ, ಇರುವರ ಮುಂದೆ ಪ್ರಾಜ್ಞರಾದ ವೈದ್ಯರನ್ನು ನಾನಾವಿಧ ಕುಕಲ್ಪನೆಗಳಿಂದ ದೂಷಿಸುವ ಸ್ವಭಾವವುಳ್ಳವರಾಗಿರುವರು. ಅವರು ಈ ಟೀಕನ್ನು ದೂಷಿಸ ಬೇಕೆಂಬ ತಾತ್ಪರ್ಯವುಳ್ಳವರಾದರೆ ಸಪ್ರಮಾಣವಾಗಿ ದೋಷಗಳನ್ನು ಉದ್ಘಾಟಿಸಿ, ಪತ್ರಿಕಾಮೂಲಕ ನನಗೆ ತಿಳಿಸಿ ಅನಂತರದಲ್ಲಿ ಬೇಕಾದ ಹಾಗೆ ದೂಷಿಸಬಹುದು.

ಪ್ರಾಜ್ಞರಾದವರು ಇದರಲ್ಲಿ ವರ್ಣವ್ಯತ್ಯಾಸವಿದ್ದರೆ ಪ್ರಮಾದದಿಂದುಂಟಾಯಿತೆಂದು ತಿಳಿಯಬೇಕು ತಾತ್ಪರ್ಯ ವ್ಯತ್ಯಾಸವಿದ್ದಪಕ್ಷದಲ್ಲಿ ನನಗೆ ತಿಳಿಸಿ, ನನ್ನ ಅಜ್ಞಾನವನ್ನು ಪರಿಹರಿಸಬೇಕು. ಅಜ್ಞರಿಗೆ ತಿಳಿಯುವಂತೆ ಈ ಗ್ರಂಥಕ್ಕೆ ಅರ್ಥವಂ ಬರೆಯುವುದಕ್ಕಾಗುವದಿಲ್ಲವಾದ್ದರಿಂದ, ಪ್ರಾಜ್ಞರಿಗೆ ತಿಳಿಯುವಂತೆ ಪದಶಃ ಟೀಕನ್ನು ಅನ್ವಯಕ್ರಮವಾಗಿ ಬರೆಯುತ್ತೇನೆ. ಅಜ್ಞರಿಗೆ ತಿಳಿಯುವಹಾಗೆ ಬರೆಯದೇ ಇರುವದು ದೋಷವೆಂದು ಹೇಳುವವರು, ' ರೂಪಂಕೀದೃಕ್ಷಮುಲವದನೆ ' ಎಂಬ ಶ್ಲೋಕಕ್ಕೂ (ಪುಟ. ೮೦), ' ಅತಿಸಾರಪ್ರಶಮನೀ ' ಎಂಬುವದಕ್ಕೂ (ಪುಟ. ೫೯), ' ಪುಲೋಮಜಾವಲ್ಲಭಸೂನು ' ಎಂಬುವದಕ್ಕೂ (ಪುಟ. ೮೪), ' ಭಿಂದಂತಿಕೇ ಕುಂಜರಕುಂಭಪಾಳಿಂ ' ಎಂಬುವದಕ್ಕೂ (ಪುಟ. ೧೨೮), ' ಕಫಾದ್ಭವತಿ ಭೋಭೀರು' ಎಂಬುವದಕ್ಕೂ (ಪುಟ. ೧೪೩), ಟೀಕನ್ನು ಬರೆದು ಅಜ್ಞರಿಗೆ ಆ ಟೀಕಿನಿಂದ ಆ ಶ್ಲೋಕಗಳ ಅಭಿಪ್ರಾಯವನ್ನು ತಿಳಿಸಿ, ನನ್ನ ಮೇಲೆ ದೋಷವನ್ನು ಆರೋಪಿಸಬಹುದು. ಪ್ರಸಕ್ತಾನುಪ್ರಸಕ್ತಿಯಿಂದೇನು ಪ್ರಯೋಜನ. ಪ್ರಕೃತವನ್ನನುಸರಿಸೋಣ.

ಅಗರದ ಪುಟ್ಟಸಾಮೈಯ್ಯ ಪಂಡಿತರು.

---

146

॥ ಶ್ರೀ ಗಣಾಧಿಪತಯೇ ನಮಃ ॥

# ವೈದ್ಯಜೀವನ

## ದೀಪಿಕಾ ಸಹಿತ

---

ಪ್ರಕೃತಿಸುಭಗಗಾತ್ರಂ ಪ್ರೀತಿಪಾತ್ರಂ ರಮಾಯಾಃ ।
ದಿಶತು ಕಿಮಪಿಧಾಮ ಶ್ಯಾಮಲಂ ಮಂಗಳಂ ವಃ ॥
ಅರುಣ ಕಮಲಲೀಲಾಂ ಯಸ್ಯಪಾದೌ ದಧಾತೇ ।
ಪ್ರಣತಹರಜಟಾಲೀ ಗಾಂಗರಿಂಗತ್ತರಂಗೇ ॥ ೧ ॥

---

ಮಹೀಶೂರಪುರಾವಾಸಿ ಪುಟ್ಟಸಾಮ್ಯೈಯ್ಯ ಸೂರಿಣಾ ।
ಟೀಕಾ ಕರಿಷ್ಯತೇ ನಾಮ್ನಾ ವೈದ್ಯಜೀವನದೀಪಿಕಾ ॥



ಮಂಗಳಾಚರಣೆ

ಯಸ್ಯ—ಯಾವ ರಾಮರೂಪತೇಜಸ್ಸಿನ, ಪಾದೌ—ಕಾಲುಗಳು, ಪ್ರಣತ–ನಮಸ್ಕಾರಮಾಡಿದ, ಹರ–ಪರಮೇಶ್ವರನ, ಜಟಾಲೀ-ಜಡೆಗಳ ಗುಂಪಿನಲ್ಲಿರುವ, ಗಾಂಗ-ಗಂಗಾ ನದೀಸಂಬಂಧಿಯಾದ, ರಿಂಗತ್ - ಚಲಿಸುತ್ತಲಿರುವ, ತರಂಗೇ–ಅಲೆಯಲ್ಲಿ, ಅರುಣಕಮಲ-ಕೆಂದಾವರೆಯ, ಲೀಲಾಂ - ವಿಲಾಸ ವನ್ನು, ದಧಾತೇ-ಧರಿಸುತಲಿವೆಯೋ, ಪ್ರಕೃತಿ-ಸ್ವಭಾವದಿಂದ, ಸುಭಗ-ಸುಂದರವಾದ, ಗಾತ್ರಂ - ಶರೀರವುಳ್ಳ, ರಮಾಯಾಃ-ಲಕ್ಷ್ಮೀರೂಪಳಾದ ಸೀತಾದೇವಿಯ, ಪ್ರೀತಿ-ಅನುರಾಗಕ್ಕೆ, ಪಾತ್ರಂ-ವಿಷಯವಾದ, ಶ್ಯಾಮಲಂ-ಕಪ್ಪುವರ್ಣವಾದ, ಕಿಮಪಿ-ಅನಿರ್ವಚನೀಯವಾದ, ಧಾಮ-ಆ ತೇಜಸ್ಸು, ವಃ-ಅಧ್ಯೇತೃಗಳಾದ ನಿಮಗೆ, ಮಂಗಳಂ-ಇಷ್ಟಾರ್ಥರೂಪವಾದ ಮಂಗಳ

ವನ್ನು, ದಿಶತು-ಕೊಡಲಿ, ಎಂದು ಗ್ರಂಥಕಾರನು ಶಿಷ್ಟಾಚಾರಾನುಮಿತ ಶ್ರುತಿಬೋಧಿತಕರ್ತವ್ಯತಾಕವಾದ ಮಂಗಳವನ್ನು ಬೋಧಿಸುವ ಶ್ಲೋಕ ವನ್ನು ಶಿಷ್ಯರಿಗೆ ಕರ್ತವ್ಯತ್ವ ಪ್ರಕಾರಕಜ್ಞಾನವುಂಟಾಗುವದಕ್ಕೋಸ್ಕರವಾಗಿ ಗ್ರಂಥಾದಿಯಲ್ಲಿ ನಿಬಂಧಿಸಿದನು.

ರತ್ನಂ ವಾಮದೃಶಾಂ ದೃಶಾಂಸುಖಕರಂ ಶ್ರೀಸಪ್ತಶೃಂಗಾಸ್ಪದಂ ।
ಸ್ಪಷ್ಟಾಷ್ಟಾದಶಬಾಹು ತದ್ಭಗವತೋ ಭರ್ಗಸ್ಯ ಭಾಗ್ಯಂ ಭಜೇ ॥
ಯದ್ಭಕ್ತೇನ ಮಯಾ ಘಟಸ್ತನಿ ಘಟೀಮಧ್ಯೇ ಸಮುತ್ಪಾದ್ಯತೇ ।
ಪದ್ಯಾನಾಂ ಶತಮಂಗನಾಧರಸುಧಾಸ್ಪರ್ಧಾವಿಧಾನೋದ್ಧುರಂ ॥ ೨ ॥

ಹೇಘಟಸ್ತನಿ-ಎಲೆ ಕಲಶದಂತೆ ಕುಚಗಳುಳ್ಳ ಸ್ತ್ರೀಯೇ, ಯತ್-ಯಾವ ಪಾರ್ವತೀಸ್ವರೂಪವಾದ ಈಶೈಶ್ವರ್ಯಕ್ಕೆ, ಭಕ್ತೇನ-ಭಕ್ತನಾದ, ಮಯಾ-ನನ್ನಿಂದ. ಘಟೀಮಧ್ಯೇ-ಒಂದುಗಳಿಗೆಯೊಳಗೆ, ಅಂಗನಾ-ಸ್ತ್ರೀಯರ, ಅಧರಸುಧಾ-ಅಧರಾಮೃತದೊಡನೆ, ಸ್ಪರ್ಧಾವಿಧಾನ-ಹುರುಡಿಸುವ ವಿಷಯ ದಲ್ಲಿ, ಉದ್ಧುರಂ- ಸಮರ್ಥವಾದ, ಪದ್ಯಾನಾಂ- ಶ್ಲೋಕಗಳ, ಶತಂ - ನೂರು, ಸಮುತ್ಪಾದ್ಯತೇ-ಮಾಡಲ್ಪಡುತ್ತಿಯೋ, ತತ್- ಆ ಪ್ರಸಿದ್ಧವಾದ, ವಾಮ ದೃಶಾಂ - ಸ್ತ್ರೀಯರೊಳಗೆ, ರತ್ನಂ - ಶ್ರೇಷ್ಠವಾದ, ದೃಶಾಂ- ನೇತ್ರಗಳಿಗೆ, ಸುಖ ಕರಂ - ಸಂತೋಷವನ್ನುಂಟುಮಾಡುತಲಿರುವ, ಶ್ರೀ - ಸಂಪದ್ಯುಕ್ತವಾದ, ಸಪ್ತಶೃಂಗ - ಸಪ್ತಶೃಂಗವೆಂಬ ಪರ್ವತವೇ, ಆಸ್ಪದಂ- ಸ್ಥಾನವಾಗುಳ್ಳ, ಸ್ಪಷ್ಟ-ಸ್ಫುಟಗಳಾದ, ಅಷ್ಟಾದಶ- ಹದಿನೆಂಟಾದ, ಬಾಹು - ಭುಜಗಳುಳ್ಳ, ಭಗ ವತಃ - ಷಡ್ಗುಣೈಶ್ವರ್ಯ ಸಂಪನ್ನನಾದ, ಭರ್ಗಸ್ಯ - ಪರಮೇಶ್ವರನ, ಭಾಗ್ಯಂ - ಪಾರ್ವತೀರೂಪೈಶ್ವರ್ಯವನ್ನು, ಭಜೇ - ಸೇವಿಸುತಲಿಧ್ದೇನೆಂದು ಗ್ರಂಥಕಾರನು ವಿಘ್ನಬಾಹುಳ್ಯ ಶಂಕೆಯಿಂದ ಮಂಗಳಾಂತರವನ್ನು ಮಾಡಿದನು.

ದಿವಾಕರಪ್ರಸಾದೇನ ರೋಗ್ಯಾರೋಗ್ಯಸಮಾಹಯಾ ।
ಸಮಾನೇನ ವಯಂ ಕುರ್ಮಃ ಕಾವ್ಯವದ್ವೈದ್ಯಜೀವನಂ ॥ ೩ ॥

ದಿವಾಕರ- ತಮ್ಮ ತಂದೆಯಾದ ದಿವಾಕರಶಾಸ್ತ್ರಿಯು, ಅಥವಾ

ಗ್ರಂಥ ಪ್ರಸ್ತಾವನೆ

"ಆರೋಗ್ಯಂಭಾಸ್ಕರಾದಿಚ್ಛೇತ್"ಯೆಂಬ ನ್ಯಾಯದಿಂದ ಸೂರ್ಯನ,ಪ್ರಸಾದೇನ-ಅನುಗ್ರಹದಿಂದ,ರೋಗಿ-ಆತುರರ ಆರೋಗ್ಯ—ರೋಗಾಭಾವದ, ಸಮೀಹಯಾ—ಇಚ್ಛೆಯಿಂದ, ವಯಂ-ನಾವು, ಕಾವ್ಯವತ್-ಕಾವ್ಯದಂತೆ ಶೃಂಗಾರಾದಿ ರಸಭರಿತವಾದ,ವೈದ್ಯಜೀವನಂ-ವೈದ್ಯಜೀವನವೆಂಬ ಹೆಸರುಳ್ಳ ಗ್ರಂಥವನ್ನು, ಸಮಾಸೇನ-ಸಂಕ್ಷೇಪದಿಂದ, ಕುರ್ಮಃ-ಮಾಡುತಲಿಧೇವೆಂದು ಗ್ರಂಥಕಾರನು ಪ್ರಯೋಜನಾದಿಗಳನ್ನು ಹೇಳಿದನು.

ತಥಾಪಿ ಕ್ರಿಯತೇ ಗ್ರಂಥಃ ಸಂತಿ ಯದ್ಯಪಿ ದುರ್ಜನಾಃ ।
ನಹಿ ದಸ್ಯುಭಯಾಲ್ಲೋಕೋ ದೈನ್ಯವಾನೇವ ವರ್ತತೇ ॥ ೪ ॥

ಇಹ- ಈ ಲೋಕದಲ್ಲಿ, ದುರ್ಜನಾಃ- ಗ್ರಂಥದೂಷಕರು, ಸಂತಿಯದ್ಯಪಿ- ಇದ್ದೇಯಿದ್ಧಾರೆ, ತಥಾಪಿ- ಹಾಗಾದಾಗ್ಯೂ, ಗ್ರಂಥಃ- ವೈದ್ಯಜೀವನವೆಂಬೀಗ್ರಂಥವು, ಕ್ರಿಯತೇ-ಮಾಡಲ್ಪಡುತಲಿಧೆ. ಲೋಕಃ- ಜನವು, ದಸ್ಯುಭಯಾತ್-ಶತ್ರುಭಯದ್ವೆಸೆಯಿಂದ, ದೈನ್ಯವಾನ್-ದರಿದ್ರವಾಗಿ, ನವರ್ತತೇಹಿ- ಇರುವದಿಲ್ಲವಲ್ಲ.

ತಾತ್ಪರ್ಯ.—ಹಣವನ್ನು ಸಂಪಾದಿಸಿದರೆ ಕಳ್ಳರು ಕದ್ದುಕೊಂಡು ಹೋಗುವರೆಂಬ ಭಯದಿಂದ ಜನವು ದ್ರವ್ಯವನ್ನು ಸಂಪಾದಿಸದೆ ಹೇಗೆ ದರಿದ್ರವಾಗಿ ಇರುವದಿಲ್ಲವೋ ಹಾಗೆ ದೂಷಕರ ಭಯದಿಂದ ಗ್ರಂಥಕಾರನು ಗ್ರಂಥವನ್ನು ಮಾಡದೆ ಇರುವದಿಲ್ಲ.

ಯೇಷಾಂ ನ ಚೇತೋಲಲನಾಸುಲಗ್ನಂ ಮಗ್ನಂ ನ ಸಾಹಿತ್ಯಸುಧಾಸಮುದ್ರೇ ।
ಜ್ಞಾಸ್ಯಂತಿ ತೇ ಕಿನ್ನು ಮಮ ಪ್ರಯಾಸಾನಂಧಾ ಯಥಾ ವಾರವಧೂವಿಲಾಸಾನ್ ॥ ೫ ॥

ಯೇಷಾಂ-ಯಾವಜನರ, ಚೇತಃ-ಮನಸ್ಸು, ಲಲನಾಸು-ಸ್ತ್ರೀಯರಲ್ಲಿ, ನಲಗ್ನಂ-ಆಸಕ್ತವಲ್ಲವೋ, ಸಾಹಿತ್ಯ-ಸಾಹಿತ್ಯವೆಂಬ, ಸುಧಾಸಮುದ್ರೇ-ಅಮೃತಾರ್ಣವದಲ್ಲಿ, ನಮಗ್ನಂ-ಮುಣುಗಿದ್ದಲ್ಲವೋ, ತೇ-ಆ ಜನರು, ಮಮ-ನನ್ನ, ಪ್ರಯಾಸಾನ್-ಆಯಾಸಗಳನ್ನು, ಅಂಧಾಃ-ಕುರುಡರು, ವಾರವಧೂ-ವೇಶ್ಯಾಸ್ತ್ರೀಯರ, ವಿಲಾಸಾನ್ಯಥಾ- ಹಾವಭಾವಾದಿಗಳಂತೆ, ಜ್ಞಾಸ್ಯಂತಿಕಿಂ - ತಿಳಿದಾರೇನು ?

ತಾತ್ಪರ್ಯ.—ಕುರುಡರು ಸೂಳೆಯರ ಶೃಂಗಾರಚೇಷ್ಟೆಗಳನ್ನು ಹೇಗೆ ತಿಳಿಯಲಶಕ್ತರೋ ಹಾಗೆ ಸ್ತ್ರೀಯರಲ್ಲನಾಸಕ್ತರಾಗಿಯೂ, ಸಾಹಿತ್ಯ ಜ್ಞಾನ ಶೂನ್ಯರಾಗಿಯೂ ಇರುವ ಜನರು ತನ್ನ ಆಯಾಸವನ್ನು ತಿಳಿಯಲಶಕ್ತ ರೆಂದು ತಾತ್ಪರ್ಯವು.

ಗದಗಂಜನಾಯಚತುರೈಶ್ಚರಕಾದ್ಯೈರ್ಮುನಿಭಿರ್ನೃಣಾಂಕರುಣಯಾಕಥಿತಂಯತ್ ।
ಅಖಿಲಂಲಿಖಾಮಿಖಲು ತಸ್ಯರಹಸ್ಯಂ ಸ್ವಕಪೋಲಕಲ್ಪಿತಮಿಹಾಸ್ತಿನಕಿಂಚಿತ್ ॥೬॥

ಚತುರೈಃ - ಸಮರ್ಥರಾದ, ಚರಕ - ಚರಕಮುನಿಯೇ, ಆದ್ಯೈಃ- ಮೊದಲಾಗುಳ್ಳ, ಮುನಿಭಿಃ - ಸುಶ್ರುತಾಗ್ನಿವೇಶಾದಿ ಋಷಿಗಳಿಂದ, ನೃಣಾಂ- ಮನುಷ್ಯರ ವಿಷಯವಾದ, ಕರುಣಯಾ - ದಯೆಯಿಂದ, ಗದ -ರೋಗ ಗಳ, ಗಂಜನಾಯ - ನಾಶಕ್ಕೋಸ್ಕರ, ಯತ್-ಯಾವದು, ಕಥಿತಂ-ಹೇಳ ಲ್ಪಟ್ಟಿತೋ, ತಸ್ಯ-ಅದರ, ಅಖಿಲಂ - ಸಮಸ್ತವಾದ, ರಹಸ್ಯಂ-ಗೂಢಾರ್ಥ ವನ್ನು, ಲಿಖಾಮಿ - ಬರೆಯುತಲಿಧೇನೆ. ಇಹ- ಈ ಗ್ರಂಥದಲ್ಲಿ, ಸ್ವಕಪೋಲ- ಸ್ವಕಪೋಲದಿಂದ, ಕಲ್ಪಿತಂ - ನಿರ್ಮಿಸಲ್ಪಟ್ಟದ್ದು, ಕಿಂಚಿತ್ - ಸ್ವಲ್ಪವಾದರೂ, ನಾಸ್ತಿ - ಇಲ್ಲ.

ತಾತ್ಪರ್ಯ.—ಸುಶ್ರುತಬಾಹಟಾದಿಗಳಿಂದ ಹೇಳಲ್ಪಟ್ಟ ವಿಷಯ ವನ್ನು ಹೇಳುತ್ತೇನೆಯೇ ಹೊರ್ತು ನನ್ನ ಬುದ್ಧಿಶಕ್ತಿಯಿಂದ ಕಲ್ಪಿಸಿ ಯಾವ ವಿಷಯುವನ್ನೂ ಹೇಳುವುದಿಲ್ಲ.

ಗುರೋರಧೀತಾಖಿಲವೈದ್ಯವಿದ್ಯಃ ಪೀಯೂಷಪಾಣಿಃ ಕುಶಲಃ ಕ್ರಿಯಾಸು ।
ಗತಸ್ಪೃಹೋ ಧೈರ್ಯಧರಃ ಕೃಪಾಳುಃ ಶುದ್ಧೋಧಿಕಾರೀ ಭಿಷಗೀದೃಶಃ ಸ್ಯಾತ್॥೭॥

ವೈದ್ಯಲಕ್ಷಣ

ಗುರೋಃ - ಗುರುವಿನ ದೆಸೆಯಿಂದ, ಅಧೀತ - ಅಭ್ಯಾಸಮಾಡಲ್ಪಟ್ಟ, ಅಖಿಲ-ಸಮಸ್ತವಾದ, ವೈದ್ಯವಿದ್ಯಃ-ವೈದ್ಯಶಾಸ್ತ್ರವುಳ್ಳ, ಪೀಯೂಷಪಾಣಿಃ - ಅಮೃತಹಸ್ತನಾದ, ಕ್ರಿಯಾಸು - ವಮನವಸ್ತಿವಿರೇಚನಾದಿಪ್ರಯೋಗಗಳಲ್ಲಿ, ಕುಶಲಃ- ಚತುರನಾದ, ಗತ-ಹೋದಂಥ, ಸ್ಪೃಹಃ - ಧನಾದ್ಯಭಿಲಾಷೆಯುಳ್ಳ, ಧೈರ್ಯ-

ಧೈರ್ಯವನ್ನು, ಧರಃ-ಧರಿಸಿರುವ, ಕೃಪಾಳುಃ - ದಯಾಶಾಲಿಯಾದ, ಶುದ್ಧಃ-ತ್ರಿಕರಣಶುದ್ಧನಾದ ಪುರುಷನು, ಭಿಷಕ್-ವೈದ್ಯನು. ಈದೃಶಃ-ಈ ಪೂರ್ವೋಕ್ತಗುಣಸಾಮಾನ್ಯವುಳ್ಳವನೇ, ಅಧಿಕಾರೀ-ಔಷಧಾದಿಗಳಂ ಪ್ರಯೋಗಿಸುವ ವಿಷಯದಲ್ಲಿ ಅಧಿಕಾರಿಯು, ಸ್ಯಾತ್ - ಆದಾನು.

ತಾತ್ಪರ್ಯ.—ಈ ಗುಣಗಳಲ್ಲಿ ಯಾವದೊಂದರಿಂದಲಾದರೂ ರಹಿತನಾದ ಪಕ್ಷದಲ್ಲಿ ಅಧಿಕಾರಿಯಲ್ಲವೆಂದು ತಿಳಿಯಬೇಕು. ಹಸ್ತಗಳಲ್ಲಿ ಮತ್ಸ್ಯ, ಚಾಪಾದಿ ರೇಖೆಯುಳ್ಳವನು ಅಮೃತಹಸ್ತನೆಂದು ಭೇಷಜಕಲ್ಪದಲ್ಲಿ ಹೇಳಿಧೆ.

ಆದೌ ನಿದಾನವಿಧಿನಾ ವಿದಧ್ಯಾದ್ವ್ಯಾಧಿನಿಶ್ಚಯಂ ।
ತತಸ್ಸಾಧ್ಯಂ ಸಮೀಕ್ಷೇತ ಪಶ್ಚಾದ್ಭಿಷಗುಪಾಚರೇತ್ ॥ ೮ ॥

ಆದೌ - ಮೊದಲು, ನಿದಾನವಿಧಿನಾ - ರೋಗಜ್ಞಾನವನ್ನು ಹುಟ್ಟಿಸುವ ನಿದಾನವಿಧಿಯಿಂದ, ವ್ಯಾಧಿನಿಶ್ಚಯಂ - ರೋಗನಿರ್ಣಯವನ್ನು, ವಿದಧ್ಯಾತ್-ಮಾಡಬೇಕು. ತತಃ - ಆಬಳಿಕ, ಸಾಧ್ಯಂ - ಸಾಧ್ಯಜಾಡ್ಯವನ್ನು, ಸಮೀಕ್ಷೇತ - ತಿಳಿಯಬೇಕು. ಪಶ್ಚಾತ್ - ಸಾಧ್ಯಜ್ಞಾನಾನಂತರದಲ್ಲಿ, ಭಿಷಕ್-ವೈದ್ಯನು, ಉಪಾಚರೇತ್ - ಚಿಕಿತ್ಸೆಯಂ ಮಾಡಬೇಕು.

ತಾತ್ಪರ್ಯ.—ಪ್ರಥಮತಃ ನಿದಾನಪ್ರಾಗ್ರೂಪಾದಿಗಳಿಂದ ರೋಗವನ್ನು ಪರೀಕ್ಷಿಸಿ ಆಬಳಿಕ ಅದರ ಸಾಧ್ಯಾಸಾಧ್ಯತ್ವಗಳಂ ತಿಳಿದು ಅನಂತರದಲ್ಲಿ ಆ ರೋಗವು ಸಾಧ್ಯವಾದಪಕ್ಷದಲ್ಲಿ ಚಿಕಿತ್ಸೆಯಂ ಮಾಡಬೇಕು.

ದರ್ಶನಸ್ಪರ್ಶನಪ್ರಶ್ನೈಃ ಪರೀಕ್ಷೇತ ಚ ರೋಗಿಣಂ ।
ರೋಗಂ ನಿದಾನಪ್ರಾಗ್ರೂಪಲಕ್ಷಣೋಪಶಯಾಪ್ತಿಭಿಃ ॥

ಎಂದು ವಾಗ್ಭಟಾಚಾರ್ಯರು ಹೇಳಿರುವರು.

ಔಷಧಂ ಮೂಢವೈದ್ಯಾನಾಂ ತ್ಯಜಂತು ಜ್ವರಪೀಡಿತಾಃ ।
ಪರಸಂಸರ್ಗಸಂಸಕ್ತಂ ಕಳತ್ರಮಿವ ಸಾಧವಃ ॥ ೯ ॥

ಜ್ವರಪೀಡಿತಾಃ- ಜ್ವರಾತುರರು, ಮೂಢ- ಅಜ್ಞಾನಿಗಳಾದ, ವೈದ್ಯಾನಾಂ-ವೈದ್ಯರ, ಔಷಧಂ-ಮದ್ದನ್ನು, ಸಾಧವಃ-ಸಜ್ಜನರು, ಪರ -ಪರಪುರುಷರ, ಸಂಸರ್ಗ- ಸಮಾಗಮದಲ್ಲಿ, ಸಂಸಕ್ತಂ- ಆಸಕ್ತಳಾದ, ಕಳತ್ರಮಿವ- ಹೆಂಡತಿಯಂತೆ, ತ್ಯಜಂತು - ಬಿಡಬೇಕು.

ಮೂಢ ವೈದ್ಯ ನಿಷೇಧ

ತಾತ್ಪರ್ಯ.—ಸಜ್ಜನರು ಪರಪುರುಷನಲ್ಲಿ ಆಸಕ್ತಳಾದ ಹೆಂಡತಿಯನ್ನು ಹೇಗೆ ಬಿಡುತ್ತಾರೋ ಹಾಗೆ ರೋಗಿಗಳು ಮೂಢವೈದ್ಯರ ಔಷಧವನ್ನು ಬಿಡಬೇಕು.

ಗುರೂನ್ಲಘೂನಿತಿವ್ಯಾಧೀನ್ ಕಲ್ಪಯಂಸ್ತುಭಿಷಗ್ಬುಧಃ ।
ಅಲ್ಪದೋಷಾಕಲನಯಾ ಪಥ್ಯೇವಿಪ್ರತಿಪದ್ಯತೇ ॥
ಅತೋಲ್ಪಮಲ್ಪವೀರ್ಯಂ ವಾ ಗುರುವ್ಯಾಧೌ ಪ್ರಯೋಜಿತಂ ।
ಉದೀರಯೇತ್ತರಾಂ ರೋಗಾನ್ ಸಂಶೋಷಣಮಯೋಗತಃ ॥
ಶೋಧನಂತ್ವತಿಯೋಗೇನ ವಿಪರೀತಂ ವಿಪರ್ಯಯೇ ।
ಕ್ಷಿಣುಯಾನ್ಸಮಲಾನೇವ ಕೇವಲಂವಪುರಸ್ಯತಿ ॥

ಎಂದು ವಾಗ್ಭಟಾಚಾರ್ಯರು ಹೇಳಿರುವರು.

| | | | | | | | | | | | | | | | |
|---|---|---|---|---|---|---|---|---|---|---|---|---|---|---|---|
| ಪ | ಥ್ಯೇ | ಸ | ತಿ | ಗ | ದಾ | ರ್ತ | ಸ್ಯ | ಕಿ | ಮೌ | ಷ | ಧ | ನಿ | ಷೇ | ವ | ಣಂ |
| ಪ | ಥ್ಯೇ | ಸ | ತಿ | ಗ | ದಾ | ರ್ತ | ಸ್ಯ | ಕಿ | ಮೌ | ಷ | ಧ | ನಿ | ಷೇ | ವ | ಣಂ |

ಪಥ್ಯೇಸತಿಗದಾರ್ತಸ್ಯಕಿಮೌಷಧನಿಷೇವಣಂ ।
ಪಥ್ಯೇಸತಿಗದಾರ್ತಸ್ಯಕಿಮೌಷಧನಿಷೇವಣಂ ॥೧೦॥

ಪಥ್ಯೇ—ರೋಗನಿವರ್ತಕವಾದ ಆಹಾರಾದಿಯು, ಸತಿ—ಇದ್ದ ಪಕ್ಷದಲ್ಲಿ, ಗದಾರ್ತಸ್ಯ--ರೋಗಾತುರನಿಗೆ, ಔಷಧ ನಿಷೇವಣಂ—ಔಷಧ ಸೇವನವು, ಕಿಂ—ಏನುಪ್ರಯೋಜನವನ್ನುಂಟು ಮಾಡೀತು ?

ಪಥ್ಯದ ಆವಶ್ಯಕತೆ.

ತಾತ್ಪರ್ಯ.—ಪಥ್ಯಾದಿಗಳೇ ರೋಗನಿವೃತ್ತಿಯನ್ನು ಮಾಡುತ್ತಿರಲಾಗಿ ಔಷಧಸೇವನದಿಂದೇನುಪ್ರಯೋಜನ ?

ಪಥ್ಯೇ-ರೋಗನಿವರ್ತಕವಾದ ಆಹಾರವಿಹಾರಾದಿಯು, ಅಸತಿ—ಇಲ್ಲದ ಪಕ್ಷದಲ್ಲಿ, ಗದಾರ್ತಸ್ಯ—ರೋಗಪೀಡಿತನಿಗೆ, ಔಷಧ ನಿಷೇವಣಂ—ಔಷಧ ಸೇವನೆಯು, ಕಿಂ—ಏನುಪ್ರಯೋಜನವನ್ನುಂಟುಮಾಡೀತು ?

ತಾತ್ಪರ್ಯ.—ಅಪಥ್ಯಾಹಾರಾದಿಸೇವನದಿಂದ ರೋಗ ಹೆಚ್ಚುತ್ತಿರಲು ಔಷಧ ಸೇವನದಿಂದ ಯಾವಪ್ರಯೋಜನವೂ ಉಂಟಾಗುವುದಿಲ್ಲ. ಈ ವಿಷಯದಲ್ಲಿ ಗ್ರಂಥಾಂತರಸಮ್ಮತಿಯು—

ವಿನಾಪಿಭೇಷಜೈರ್ವ್ಯಾಧಿಃ ಪಥ್ಯಾದೇವನಿವರ್ತತೇ|
ನತು ಪಥ್ಯವಿಹೀನಸ್ಯ ಭೈಷಜ್ಯಾನಾಂಶತೈರಪಿ ||

ಪಥ್ಯೇಽಸತಿಯೆಂಬ ಶ್ಲೋಕವು ಗೋಮೂತ್ರಿಕಾಬಂಧವು.

ಮಹೀಂದ್ರಮಹಿಳಾತ್ರಪಾಪ್ರದಪದಾರವಿಂದೇ
ತಥಾಪಯೋನಿಧಿಪಯಸ್ತತಿರ್ಜಲಧರೈರುಪಾತ್ತಾಯಥಾ |
ಮಮಪ್ರಕೃತಿನೀರಸಾ ನೃಪಭಿಷಗ್ಭಿರಂಗೀಕೃತಾ
ಭವಿಷ್ಯತಿ ಸರಸ್ವತೀ ರಸವತೀಮುರಾಸಾಪತೇಃ || ||೧೧||

ಹೇ ಮಹೀಂದ್ರ ಮಹಿಳಾತ್ರಪಾಪ್ರದಪದಾರವಿಂದೇ—ಎಲೆ ರಾಜಪತ್ನಿಗೆ ನಾಚಿಕೆಯನ್ನುಂಟುಮಾಡುತಲಿರುವ ಪಾದಕಮಲಗಳುಳ್ಳ ಸ್ತ್ರೀಯೆ ! ಮುರಾಸಾಪತೇಃ—ಮುರಾಸಾಯೆಂಬ ಸ್ತ್ರೀಗೆ ನಾಯಕನಾದ, ಮಮ—ನನ್ನ, ಪ್ರಕೃತಿನೀರಸಾ-ಸ್ವಭಾವದಿಂದ ಶೃಂಗಾರಾದಿರಸ ಮಧುರರಸಶೂನ್ಯವಾದ, ಸರಸ್ವತೀ-ವಾಕ್ಕು, ನೃಪಭಿಷಗ್ಭಿಃ- ರಾಜವೈದ್ಯರಿಂದ, ಅಂಗೀಕೃತಾಸತಿ-ಸ್ವೀಕರಿಸಲ್ಪಟ್ಟಂಥಾದ್ದಾಗಿ, ಜಲಧರೈಃ- ಮೇಘಗಳಿಂದ, ಉಪಾತ್ತಾ- ಸ್ವೀಕರಿಸಲ್ಪಟ್ಟ, ಪಯೋನಿಧಿಪಯಸ್ತತಿರ್ಯಥಾ- ಸಮುದ್ರದ ಜಲಸಮೂಹದಂತೆ, ರಸವತೀ—ಶೃಂಗಾರಾದಿರಸವೂ ಮಧುರರಸವೂ ಉಳ್ಳದ್ದು, ಭವಿಷ್ಯತಿ—ಆಗುತ್ತೆ.

ಸ್ವಾಪಂಕಾರ ಖಂಡನ

ತಾತ್ಪರ್ಯ.—ಸಮುದ್ರದ ನೀರಿನಲ್ಲಿ ಸ್ವಭಾವತಃ ಮಧುರರಸವಿಲ್ಲದಾಗ್ಯೂ, ಮೇಘಗಳು ಸ್ವೀಕರಿಸಿದನಂತರದಲ್ಲಿ, ಹೇಗೆ ಮಧುರರಸವುಂಟಾಗುವದೋ, ಹಾಗೆ ನನ್ನ ವಾಕ್ಕಿನಲ್ಲಿ ಶೃಂಗಾರರಸವಿಲ್ಲದಾಗ್ಯೂ, ರಾಜವೈದ್ಯರು ಸ್ವೀಕರಿಸಿದನಂತರದಲ್ಲಿ ಶೃಂಗಾರರಸವುಂಟಾಗುವದು. ರಾಜವೈದ್ಯರು ತಮ್ಮ ಪಾಂಡಿತ್ಯಮಹಿಮೆಯಿಂದ ಶೃಂಗಾರರಸವನ್ನು ಕಲ್ಪಿಸುವರು.

ಇಹ ಗಮಿಷ್ಯತಿ ವೈದ್ಯಮತಿಃ ಶ್ರಮಂ ಪ್ರಥಮಮೇವ ಪುರಸ್ತುಮಹಾಸುಖಂ ।
ಪ್ರಿಯತಮಸ್ಯ ಮೃಗಾಕ್ಷಿ ಸಮಾಗಮೇ ನವಕರಗ್ರಹಣಾ ಗೃಹಿಣೀ ಯಥಾ ॥೧೨॥

ಹೇಮೃಗಾಕ್ಷಿ-ಎಲೇ ಜಿಂಕೆಯಕಣ್ಣುಗಳಂತೆ ಕಣ್ಣುಗಳುಳ್ಳ ಸ್ತ್ರೀಯೆ! ಇಹ—ಈ ನನ್ನ ಗ್ರಂಥದಲ್ಲಿ, ವೈದ್ಯಮತಿಃ—ವೈದ್ಯನ ಬುದ್ಧಿಯು, ಪ್ರಿಯತಮಸ್ಯ-ನಾಯಕನ, ಸಮಾಗಮೇ-ಸಂಬಂಧಕಾಲದಲ್ಲಿ, ನವಕರಗ್ರಹಣಾ—ಹೊಸದಾಗಿ ಮದುವೆಯಾದ, ಗೃಹಿಣೀಯಥಾ—ಹೆಂಡತಿಯಂತೆ, (ಈ ದೃಷ್ಟಾಂತವು ಜಾತ್ಯಂತರದಲ್ಲಿ ಸಂಭವಿಸುತ್ತೆ) ಪ್ರಥಮಮೇವ—ಮೊದಲೇ, ಶ್ರಮಂ-ಆಯಾಸವನ್ನು, ಗಮಿಷ್ಯತಿ - ಹೊಂದುತ್ತೆ, ಪುರಸ್ತು - ಅನಂತರದಲ್ಲಾದರೋ, ಮಹಾಸುಖಂ - ಅತಿ ಸಂತೋಷವನ್ನು, ಗಮಿಷ್ಯತಿ-ಹೊಂದುತ್ತೆ.

ಗ್ರಂಥಾಭಿರುಚಿ

ತಾತ್ಪರ್ಯ.—ನವೋಢಳಾದ ಸ್ತ್ರೀಯು ಗಂಡನ ಪ್ರಥಮ ಸಮಾಗಮ ಕಾಲದಲ್ಲಿ ತನ್ನಲ್ಲಿ ಪ್ರೌಢಿಮೆ ಇಲ್ಲದಕಾರಣ ಮೊದಲು ಆಯಾಸವಂ ಹೊಂದಿ ಆ ಬಳಿಕ ಹೇಗೆ ರತ್ಯಾನಂದವನ್ನನುಭವಿಸುತಲಿರುವಳೋ, ಹಾಗೆ ವೈದ್ಯನ ಬುದ್ಧಿಯು ನನ್ನ ಗ್ರಂಥದಲ್ಲಿ ದುರ್ಜ್ಞೇಯಾರ್ಥವಿರುವದರಿಂದ ಮೊದಲಾಯಾಸವಂ ಹೊಂದಿ ಅರ್ಥವಂ ತಿಳಿದ ಬಳಿಕ ರಸಜ್ಞಾನದಿಂದ ಪರಮಾನಂದವಂ ಹೊಂದುವದು.

ಯತಸ್ಸರ್ವೇಷು ರೋಗೇಷು ಪ್ರಾಯಶೋಬಲವಾನ್ ಜ್ವರಃ ।
ಅತಸ್ತಸ್ಯಪ್ರತೀಕಾರಂ ಪ್ರಥಮಂ ಬ್ರೂಮಹೇ ವಯಂ ॥೧೩॥

ಯತಃ - ಯಾವಕಾರಣದಿಂದ, ಸರ್ವೇಷು - ಸಮಸ್ತಗಳಾದ, ರೋ

ಗೇಷು-ಜಾಡ್ಯಗಳಲ್ಲಿ, ಪ್ರಾಯಶಃ - ಬಹುಪ್ರಕಾರವಾಗಿ, ಜ್ವರಃ - ಜ್ವರರೋಗವು, ಬಲವಾ೯ - ಪ್ರಬಲವಾದ್ದೋ, ಅತಃ - ಆ ಕಾರಣದಿಂದ, ತಸ್ಯ - ಆ ಜ್ವರದ, ಪ್ರತೀಕಾರಂ-ಚಿಕಿತ್ಸೆಯನ್ನು, ಪ್ರಥಮಂ—ಮೊದಲು, ವಯಂ-ನಾವು, ಬ್ರೂಮಹೇ-ಹೇಳುತಲಿಧೇವೆ. ಈ ವಿಷಯದಲ್ಲಿ ಚರಕವಾಗ್ಭಟಾದಿಗಳು—

ಜ್ವರಪ್ರಾಧಾನ್ಯ

ರೋಗರಾಟ್ಸರ್ವಭೂತಾನಾ ಮಂತಕೃದ್ದಾರುಣೋ ಜ್ವರಃ ।
ತಸ್ಮಾತ್ತಸ್ಯ ವಿಶೇಷೇಣ ಯತೇತ ಪ್ರಥಮಂ ಭಿಷಕ್ ॥
ಜ್ವರೋ ರೋಗಪತಿಃ ಪಾಪ್ಮಾ ಮೃತ್ಯುರೋಜೋಶನೋಂತಕಃ ।
ಕ್ರೋಧೋದಕ್ಷಾಧ್ವರಧ್ವಂಸಿ ರುದ್ರೋರ್ಧ್ವನಯನೋದ್ಭವಃ ॥

ಎಂದು ಹೇಳಿರುವರು.

ದೇವದಾರು ಧನಾ ವಿಶ್ವಾ ಬೃಹತೀದ್ವಯಪಾಚನಂ ।
ಜ್ವರೇ ಪೂರ್ವಂ ಪಿಬೇಚ್ಚಾರು ಪಯೋಧರಧರಾಧರೇ ॥ ೧೪ ॥

ಹೇ ಚಾರುಪಯೋಧರಧರಾಧರೇ - ಎಲೆ ಸುಂದರಗಳಾಗಿಯೂ ಪರ್ವತದಂತೆ ಸ್ಥೂಲಗಳಾಗಿಯೂ ಇರುವ ಕುಚಗಳುಳ್ಳ ಸ್ತ್ರೀಯೆ! ದೇವದಾರು-ದೇವದಾರುಚಕ್ಕೆ, ಧನಾ-ಕೊತ್ತುಂಬರೀಬೀಜ, ವಿಶ್ವಾ—ಸುಂಟಿ, ಬೃಹತೀದ್ವಯ-ಹೆಗ್ಗುಳ್ಳ ನೆಲಗುಳ್ಳಗಳು ಇವುಗಳ, ಪಾಚನಂ—ಆಮರಸವಂ ಪಕ್ವಮಾಡುವ ಕಷಾಯವನ್ನು, ಜ್ವರೇ—ಜ್ವರರೋಗದಲ್ಲಿ, ಪೂರ್ವಂ—ಮೊದಲು, ಪಿಬೇತ್—ಪಾನಮಾಡಬೇಕು.

ಜ್ವರಪಾಚನಕ್ಕೆ ಔಷಧ. (ದೇವದಾರು ಕಷಾಯ)

ನಾಗರಂ ದೇವಕಾಷ್ಠಂ ಚ ಧಾನ್ಯಾಕಂ ಬೃಹತೀದ್ವಯಂ ।
ದದ್ಯಾತ್ಪಾಚನಕಂ ಪೂರ್ವಂ ಜ್ವರಿತಾಯ ಜ್ವರಾಪಹಂ ॥

ಎಂದು ಗ್ರಂಥಾಂತರಸಮ್ಮತಿ ಇರುವುದು.

ಭಿನ್ನೋದ್ಭವಾಂಭೋಧರಧನ್ವಯಾಸೈಃ ಕಿರಾತತಿಕ್ತಾಂಬುದರೇಣುಯಾಸೈಃ ।
ವಿಶ್ವಾವೃಷಾಂಭೋಧರಧನ್ವಯಾಸೈಃ ಕ್ವಾಥೋಮರುತ್ಪಿತ್ತಕಫಜ್ವರೇಷು ॥ ೧೫ ॥

ಛಿನ್ನೋದ್ಭವಾಂಭೋಧರಧನ್ವಯಾಸೈಃ: ಛಿನ್ನೋದ್ಭವ-ಅಮೃತವಳ್ಳಿ, ಅಂಭೋಧರ–ಕೊನ್ನಾರೆಗೆಡ್ಡೆ, ಧನ್ವಯಾಸೈಃ–ತುರುಚನಬೇರು ಇವುಗಳಿಂದುಂಟಾದ, ಕ್ವಾಥಃ–ಕಷಾಯವು, ಕಿರಾತತಿಕ್ತಾಂಬುದರೇಣುಯಾಸೈಃ: ಕಿರಾತತಿಕ್ತ–ನೆಲಬೇವು, ಅಂಬುದ–ಕೊನ್ನಾರೆಗೆಡ್ಡೆ, ರೇಣು–ಪರ್ಪ್ಪಾಟಕ, ಯಾಸೈಃ–ತುರುಚನಬೇರು, ಇವುಗಳಿಂದುಂಟಾದ, ಕ್ವಾಥಃ–ಕಷಾಯವು, ವಿಶ್ವಾವೃಷಾಂಭೋಧರಧನ್ವಯಾಸೈಃ: ವಿಶ್ವಾ–ಸುಂಟಿ, ವೃಷ-ಆಡುಸೋಗೆ, ಅಂಭೋಧರ–ಕೊನ್ನಾರೆಗೆಡ್ಡೆ, ಧನ್ವಯಾಸೈಃ–ತುರುಚನಬೇರು, ಇವುಗಳಿಂದುಂಟಾದ, ಕ್ವಾಥಃ-ಕಷಾಯವು, ಮರುತ್ಪಿತ್ತಕಫಜ್ವರೇಷು–ವಾತಜ್ವರ ಪಿತ್ತಜ್ವರ ಶ್ಲೇಷ್ಮಜ್ವರಗಳಲ್ಲಿ, ಪ್ರಯೋಜ್ಯಾಃ–ಉಪಯೋಗಿಸತಕ್ಕದ್ದೆಂದು ಶೇಷವು. ತಾತ್ಪರ್ಯ.—ಈ ಶ್ಲೋಕದಲ್ಲಿ ಮೊದಲು ಹೇಳಿದ ಕಷಾಯವು ವಾತಜ್ವರದಲ್ಲಿ ಪ್ರಯೋಗಿಸತಕ್ಕದ್ದು. ಎರಡನೇಆವರ್ತಿ ಹೇಳಿದ ಕಷಾಯವು ಪಿತ್ತಜ್ವರದಲ್ಲಿ ಪ್ರಯೋಗಿಸತಕ್ಕದ್ದು. ಮೂರನೇಸಲ ಹೇಳಿದ ಕಷಾಯವು ಶ್ಲೇಷ್ಮಜ್ವರದಲ್ಲಿ ಪ್ರಯೋಗಿಸತಕ್ಕದ್ದು.

ವಾತಪಿತ್ತ ಜ್ವರಗಳಿಗೆ ಚಿಕಿತ್ಸೆ. (ಅಮೃತ, ಕಿರಾತ, ಶುಂಠ್ಯಾದಿ ಕಷಾಯಗಳು)

## ಅಮೃತವಳ್ಳಿ, Tinospora Cordifolia. अमृता.

"Favourably spoken of by those who have tried it as a tonic, antiperiodic and diuretic" (Dymock—part I, p. 55).

## ನೆಲಬೇವು Andrographis Paniculata किराततिक्ता.

## Surgeon—Major Parker, Bombay,

in his writing–

"A preparation of this drug has, within the past few years, been largely advertised in England as a substitute for quinine and as a general powerful tonic............

As a possible means of lessening quinine expenditure, seems well worthy of consideration."

ಉಶೀರಕಲಶೀಮಹೌಷಧಕಿರಾತಕಾಂಭೋಧರ
ಸ್ಥಿರಾಬೃಹತಿಕಾದ್ವಯಾಮೃತಲತಾತ್ರಿಕಂಟೈಃ ಕೃತಂ ।
ಕಷಾಯಕಮಮುಂ ಪಿಬೇತ್ಪವನಜಜ್ವರವ್ಯಾಕುಲಃ ।
ಪುಮಾನ್ದಶಶತಛದಛದಮದಗ್ರಸಲ್ಲೋಚನೇ ॥ ೧೬ ॥

ವಾತಜ್ವರೋಪಚಾರ (ಉಶೀರಾದಿ ಕಷಾಯ)

ಹೇದಶಶತಛದಛದಮದಗ್ರಸಲ್ಲೋಚನೇ—ಎಲೆ ಕಮಲದಳ ಗರ್ವವಂ ತಿರಸ್ಕರಿಸುತಲಿರುವ ನೇತ್ರಗಳುಳ್ಳ ಸ್ತ್ರೀಯೇ! ಉಶೀರ—ಲಾಮಂಚ, ಕಲಶೀ—ಒಂದೆಲೆ ಹೊನ್ನೆ, ಮಹೌಷಧ—ಸುಂಟಿ, ಕಿರಾತಕ—ನೆಲಬೇವು, ಅಂಭೋಧರ—ಕೊನ್ನಾರೆಗೆಡ್ಡೆ, ಸ್ಥಿರಾ—ಮೂರೆಲೆ ಹೊನ್ನೆ, ಬೃಹತಿಕಾದ್ವಯ—ಹೆಗ್ಗುಳ್ಳ ನೆಲಗುಳ್ಳಗಳು, ಅಮೃತಲತಾ—ಅಮೃತವಳ್ಳಿ, ತ್ರಿಕಂಟೈಃ—ನೆಗ್ಗಿಲು, ಇವುಗಳಿಂದ, ಕೃತಂ—ಮಾಡಲ್ಪಟ್ಟ, ಅಮುಂ—ಈ, ಕಷಾಯಕಂ—ಕಷಾಯವನ್ನು, ಪವನಜ—ವಾತದಿಂದುಂಟಾದ, ಜ್ವರ—ಜ್ವರದಿಂದ, ವ್ಯಾಕುಲಃ—ಪೀಡಿತನಾದ, ಪುಮಾನ್—ಪುರುಷನು, ಪಿಬೇತ್—ಪಾನಮಾಡಬೇಕು.

ಪೀಯೂಷಲೋಕಪಾಂಚಾಲೀಚರಣಾನಾಂ ಕಷಾಯಕಃ ।
ಪೀಯಮಾನಃಪ್ರಿಯೇಹಂತಿ ಹನೂಮಜ್ಜನಕಜ್ವರಂ ॥ ೧೭ ॥

ವಾತಜ್ವರಕ್ಕೆ (ಪೀಯೂಷಾದಿ ಕಷಾಯ)

ಹೇಪ್ರಿಯೇ—ಎಲೆನಾಯಕಿಯೇ! ಪೀಯೂಷ-ಅಮೃತವಳ್ಳಿ, ಲೋಕ-ಸುಂಟಿ, ಪಾಂಚಾಲೀಚರಣಾನಾಂ—ಮೋಡಿ, ಇವುಗಳ, ಕಷಾಯಕಃ — ಕಷಾಯವು, ಪೀಯಮಾನಸ್ಸನ್—ಪಾನಮಾಡಲ್ಪಡುತಲಿರುವದಾಗಿ, ಹನೂಮಜ್ಜನಕಜ್ವರಂ—ವಾತಜ್ವರವನ್ನು, ಹಂತಿ—ನಾಶಮಾಡುತಲಿದೆ. (ಪಾಂಚಾಲೀಮಾಗಧೀಕಣಾ ಎಂದು ನಿಘಂಟು.)

ಛಿನ್ನೋದ್ಭವಾಪರ್ಪಟವಾರಿವಾಹಭೂನಿಂಬಶುಂಠೀಜನಿತಃ ಕಷಾಯಃ ।
ಸಮೀರಪಿತ್ತಜ್ವರಝುರ್ಝುರಾಣಾಂ ಕರೋತಿಭದ್ರಂಖಲು ಪಂಚಭದ್ರಃ ॥೧೮॥

ಛಿನ್ನೋದ್ಭವ–ಅಮೃತವಳ್ಳಿ, ಪರ್ಪಟ–ಪರ್ಪಾಷ್ಟಕ, ವಾರಿವಾಹ–ಕೊನ್ನಾರೆಗೆಡ್ಡೆ, ಭೂನಿಂಬ–ನೆಲಬೇವು, ಶುಂಠೀ–ಸುಂಟಿ, ಇವುಗಳಿಂದ, ಜನಿತಃ–ಮಾಡಲ್ಪಟ್ಟ, ಪಂಚಭದ್ರಃ–ಪಂಚಭದ್ರವೆಂಬ ಹೆಸರುಳ್ಳ, ಕಷಾಯಃ–ಕಷಾಯವು, ಸಮೀರಪಿತ್ತ-ವಾತಪಿತ್ತಗಳ, ಜ್ವರ-ಜ್ವರದಿಂದ, ಝುರ್ಝುರಾಣಾಂ – ಪೀಡಿತರಾದವರಿಗೆ, ಭದ್ರಂ – ಆರೋಗ್ಯರೂಪವಾದ ಮಂಗಳವನ್ನು, ಕರೋತಿಖಲು – ಮಾಡುತಲಿಥೆಯಲ್ಲವೆ ?

ವಾತಪಿತ್ತಜ್ವರಕ್ಕೆ (ಅಮೃತಾದಿ ಕಷಾಯ)

ಏಕಏವ ಖಲು ಪೈತ್ತಿಕಜ್ವರಂ ಹಂತಿ ಪರ್ಪಟಕೃತಃ ಕಷಾಯಕಃ ।
ಚಂದನೋದಕಮಹೌಷಧಾನ್ವಿತಶ್ಚೇತ್ತದಾ ಕಿಮು ಪುನರ್ವಿಚಾರಣಾ ॥೧೯॥

ಪರ್ಪಟಕೃತಃ–ಪರ್ಪಾಷ್ಟಕದಿಂದ ಮಾಡಲ್ಪಟ್ಟ, ಕಷಾಯಕಃ–ಕಷಾಯವು, ಏಕಏವ–ಅಸಹಾಯವಾಗಿಯೇ, ಪೈತ್ತಿಕಜ್ವರಂ–ಪಿತ್ತಜ್ವರವನ್ನು, ಹಂತಿ–ನಾಶಮಾಡುತಲಿಥೆ. ಚಂದನ–ರಕ್ತಚಂದನ, ಉದಕ–ಲಾಮಂಚ, ಮಹೌಷಧ-ಸುಂಟಿ, ಇವುಗಳಿಂದ, ಅನ್ವಿತಶ್ಚೇತ್–ಕೂಡಿದ್ದೇ ಆದರೆ, ತದಾ–ಆ ಕಾಲದಲ್ಲಿ, ವಿಚಾರಣಾ–ವಿಚಾರವು, ಕಿಮು–ಏನುಮಾಡತಕ್ಕದ್ದು ?

ಪಿತ್ತಜ್ವರಕಷಾಯವುಃ ಪರ್ಪಾಷ್ಟಕಾದಿ ಕಷಾಯವು

ತಾತ್ಪರ್ಯ.—ಪರ್ಪಾಷ್ಟಕ ಕಷಾಯವು ರಕ್ತಚಂದನಾದಿ ಸಹಾಯಾಂತರವಿಲ್ಲದ ಕಾಲದಲ್ಲಿಯೇ ಪಿತ್ತಜ್ವರವನ್ನು ನಾಶಮಾಡುತ್ತಲಿಥೆ. ರಕ್ತಚಂದನಾದಿ ಸಹಾಯಾಂತರದಿಂದೊಡಗೂಡಿದರೆ ಪಿತ್ತಜ್ವರವನ್ನು ಚನ್ನಾಗಿ ನಾಶಮಾಡೀತೆಂದೇನು ಹೇಳತಕ್ಕದ್ದು. ಶ್ಲೋ॥ ಕಷಾಯಪಾನಯೋರ್ಯೋಜ್ಯಂ ಚಂದನಂರಕ್ತಚಂದನಂ ॥

ಮಾನಂ ತ್ಯಜ ಪ್ರೇಯಸಿ ಮಂದನಾಯುಜ್ವಲಲ್ಲತಾಸಂಘ ಮನರ್ಘಹಾರೇ ।
ರೇವಾತಟಂ ಪಶ್ಯ ರಮಸ್ವ ವೇಣುಕ್ವಾಣೋ ಯತೋತ್ರಾಸ್ತಿನಿರಸ್ತಪಾಂಥಃ॥೨೦॥

ಅನರ್ಘಹಾರೇ : ಅನರ್ಘ—ಅಮೂಲ್ಯವಾದ, ಹಾರೇ—ಮುತ್ತಿನಸರವುಳ್ಳ, ಹೇಪ್ರೇಯಸಿ—ಎಲೇ ಪ್ರಾಣಕಾಂತೆಯೇ, ಮಾನಂ—ಕೋಪವನ್ನು, ತ್ಯಜ—ಬಿಡು. ಮಂದವಾಯು- ಮಂದಮಾರುತದಿಂದ, ಜ್ವಲತ್—ಅಳ್ಳಾಡುತಲಿರುವ, ಲತಾಸಂಘಂ—ಬಳ್ಳಿಗಳ ಗುಂಪುಳ್ಳ, ರೇವಾತಟಂ—ರೇವಾನದೀ ತೀರವನ್ನು, ಪಶ್ಯ—ನೋಡು. ಯತಃ—ಯಾವ ಕಾರಣದ ದೆಸೆಯಿಂದ, ಅತ್ರ—ಈ ರೇವಾನದಿಯ ದಡದಲ್ಲಿ, ನಿರಸ್ತ—ಹೋಗಲ್ಪಟ್ಟ, ಪಾಂಥಃ—ಮಾರ್ಗಸ್ಥರುಳ್ಳ, ವೇಣುಕ್ವಾಣಃ—ಸರಂಧ್ರವಾದ ಬಿದುರುಶಬ್ದವು, ಅಸ್ತಿ—ಇಥೆಯೋ, ಇದು ಶ್ಲೋಕಾರ್ಥವು.

(ಪಿತ್ತಜ್ವರಕ್ಕೆ ಪರ್ಪಾಷ್ಟಕ ಕಷಾಯಕ್ಕೆ ಶ್ರೇಷ್ಠತೆ)

ತಾತ್ಪರ್ಯ.—ನಾಲ್ಕು ಪಾದಗಳಲ್ಲಿಯೂ ಆದ್ಯಂತಾಕ್ಷರಂಗಳನ್ನು ತೆಗೆದು ಸೇರಿಸಿದರೆ "ಮಾಯುಜ್ವರೇ ರೇಣುಕ್ವಾಥಃ" ಎಂಬ ವರ್ಣಾವಳಿಯು ಹುಟ್ಟುತ್ತೆ. ಪಿತ್ತಜ್ವರದಲ್ಲಿ ಪರ್ಪಾಷ್ಟಕ ಕಷಾಯವು ಹಿತವೆಂದಿದರರ್ಥವು. ಇದೇ ಕವಿಗೆ ಮುಖ್ಯ ತಾತ್ಪರ್ಯವು.

ಏಕಃಪರ್ಪಟಕಃಶ್ರೇಷ್ಠಃ ಪಿತ್ತಜ್ವರನಿವಾರಣೇ ।

ಎಂದು ಗ್ರಂಥಾಂತರ ಸಮ್ಮತಿಯಿರುವುದು.

ಆರೋಗ್ಯಲಕ್ಷ್ಮೀ ರುಪಯಾತಿ ಪಿತ್ತಜ್ವರಾತುರಂ ರೇಣುಕಷಾಯಭಾಜಂ ।
ಮಾಂ ತ್ವಂ ಯಥಾ ರತ್ನಕಳೇ ಸ್ಮರಾರ್ತೇ ಕೃತಪ್ರಕೋಪಪ್ರಶಮಾ ಸಖೀಭಿಃ॥೨೧॥

ಸ್ಮರಾರ್ತೇ—ಕಾಮಾತುರಳಾದ, ಹೇರತ್ನಕಳೇ—ಎಲೆ ರತ್ನಕಳೆಯೆಂಬ ಹೆಸರುಳ್ಳ ಸ್ತ್ರೀಯೇ! ಸಖೀಭಿಃ—ಸಂಗಾತಿಯರಿಂದ, ಕೃತಪ್ರಕೋಪಪ್ರಶಮಾ: ಕೃತ—ಮಾಡಲ್ಪಟ್ಟ, ಪ್ರಕೋಪ—ಕೋಪದ, ಪ್ರಶಮಾ—ಶಾಂತಿಯುಳ್ಳ, ತ್ವಂ-ನೀನು, ಮಾಂ—ನನ್ನನ್ನು, ಯಥಾ—ಹೇಗೆ, ಉಪಯಾಸಿ—ಹೊಂದುತಲಿದ್ದೀಯೋ, ತಥಾ—ಹಾಗೆ, ಆರೋಗ್ಯಲಕ್ಷ್ಮೀಃ—ಆರೋಗ್ಯಭಾಗ್ಯವು, ರೇಣು-ಪರ್ಪಾಷ್ಟಕದ, ಕಷಾಯ—ಕಷಾಯವನ್ನು, ಭಾಜಂ—ಪಾನಮಾಡುತಲಿರುವ, ಪಿತ್ತಜ್ವರಾತುರಂ—ಪಿತ್ತಜ್ವರಪೀಡಿತನನ್ನು, ಉಪಯಾತಿ—ಹೊಂದುತಲಿದೆ.

ತಾ॥ ನೀನು ನನ್ನಮೇಲೆ ಕೋಪವಮಾಡಿದ ಕಾಲದಲ್ಲಿ ನಿನ್ನ ಸಂಗಾತಿಯರು ಆ ಕೋಪವನ್ನು ನಾಶವಮಾಡಿದರೆ ಹೇಗೆ ನನ್ನನ್ನು ಅನುಸರಿಸುತ್ತೀಯೋ ಹಾಗೆ ಆರೋಗ್ಯಭಾಗ್ಯವು ಪರ್ಪಾಷ್ಟಕ ಕಷಾಯವಂ ಪಾನ ಮಾಡುತಲಿರುವ ಪಿತ್ತಜ್ವರಿಯನ್ನನುಸರಿಸೀತು.

ದ್ರಾಕ್ಷಾಪರ್ಪಟರಾಜವೃಕ್ಷಕಟುಕಾಮುಸ್ತಾಭಯಾನಾಂಜಲಂ
ಮೂರ್ಛಾಶೋಷನಿದಾಘತೃಟ್ಪ್ರಲಪನಭ್ರಾಂತ್ಯಾದ್ಯಪಿತ್ತಜ್ವರೇ ।
ದುಸ್ಪರ್ಶಪ್ರಮದಾಕಿರಾತಕಟುಕಾಸಿಂಹಾಸ್ಯರೇಣೂದ್ಭವಃ
ಕ್ವಾಥಃಶರ್ಕರಯಾನ್ವಿತೋಥಹರತೇ ತೃಡ್ದಾಹಪಿತ್ತಜ್ವರಾನ್ ॥ ೨೨ ॥

ದ್ರಾಕ್ಷಾ–ದ್ರಾಕ್ಷಿ, ಪರ್ಪಟ–ಪರ್ಪಾಷ್ಟಕವು, ರಾಜವೃಕ್ಷ–ಕಕ್ಕೆಮೋಣ, ಕಟುಕಾ–ಕಟುಕರೋಹಿಣೀ, ಮುಸ್ತಾ–ಕೊನ್ನಾರೆಗೆಡ್ಡೆ, ಅಭಯಾನಾಂ–ಅಳಲೇಕಾಯಿ ಇವುಗಳ, ಜಲಂ–ಕಷಾಯವು, ಮೂರ್ಛಾ–ಅಜ್ಞಾನವು ಶೋಷ–ನಾಲಿಗೆ ಒಣಗೋಣ, ನಿದಾಘ–ಮೈಯುರಿ, ತೃಟ್–ನೀರಡಿಕೆ, ಪ್ರಲಪನ–ನಿರರ್ಥಕವಾದ ಮಾತು, ಭ್ರಾಂತಿ–ಅನ್ಯಥಾಜ್ಞಾನ ಇವುಗಳೇ, ಆದ್ಯ–ಮೊದಲಾಗಿಯುಳ್ಳ, ಪಿತ್ತಜ್ವರೇ–ಪಿತ್ತಜ್ವರದಲ್ಲಿ, ಹಿತಂ – ಇಷ್ಟವಾದದ್ದು, ಅಥವಾ – ಇಲ್ಲವೆ, ಶರ್ಕರಯಾ - ರಾಯಿಪುಡಿಸಕ್ಕರೆಯಿಂದ, ಅನ್ವಿತಃ - ಕೂಡಿದ, ದುಸ್ಪರ್ಶ - ತುರುಚನಬೇರು, ಪ್ರಮದಾ - ನೆಳಲು, (ಇದನ್ನಾಂಧ್ರದಲ್ಲಿ ಪ್ರೆಂಕಣಪುಚಿಪ್ಪಿನ್ನುವರು) ಕಿರಾತ–ನೆಲಬೇವು, ಕಟುಕಾ - ಕಟುಕರೋಹಿಣೀ, ಸಿಹ್ಮಾಸ್ಯ - ಆಡುಸೋಗೆ, ರೇಣು - ಪರ್ಪಾಷ್ಟಕ ಇವುಗಳ ದೆಸೆಯಿಂದ, ಉದ್ಭವಃ - ಹುಟ್ಟಿದ, ಕ್ವಾಥಃ - ಕಷಾಯವು, ತೃಟ್ - ನೀರಡಿಕೆ, ದಾಹ - ಮೈಯುರಿ, ಪಿತ್ತಜ್ವರಾನ್–ಪಿತ್ತಜ್ವರ, ಇವುಗಳನ್ನು, ಹರತೇ - ನಾಶಮಾಡುತಲಿದೆ. " ಶ್ಯಾಮಾತುಮುಹಿಳಾಹ್ವಯಾ । ಲತಾಗೋವಂದಿನೀಗುಂದ್ರಾ " ಯೆಂದಮರವು.

## ಕಟುಕರೋಹಿಣೀ. Picrorhiza Kurrooa. कटुकी.

By the Hindu writers, the root is described as bitter, acrid and stomachic and in large doses a moderate cathar-

tic. It is used in fever and dyspepsia in many purgative preparations. About two drachms of the powdered root, with sugar and warm water, act as a gentle aperient **(Dutt).**

" From my experience of the root of P. Kurrooa, I can say that it is a good stomachic and very useful in almost all forms of dyspepsia and in nervous pain of the stomach and bowels. Doses, as an antiperiodic, from 20 to 40 grains, and as a stomachic and tonic, from 10 to 15 grains, three or four times a day." **Mooden Sheriff.**

" If a strong decoction of this drug be given three or four times a day and continued for three or four days in cases of dropsy, copious watery evacuations are discharged, and the dropsical effusion is relieved. In some cases the medicine must be continued for about a week to bring about the desired result " **Surgeon—Major D. R. Thomson, M. D., C.I.E., Madras. Watt's Dictionary.**

**Major F. J. Crawford, I.M.S. of Madras says:—**

This drug in the form of tincture was tried in several cases of ill-defined fever. In most it brought down the temperature, but as it produced some looseness of the bowels at the same time, its administration had to be stopped. Its use, however, might be advised in cases of low fever

accompanied by constipation. In one case of symptomatic fever (Elephantiasis) the temperature was appreciably lowered and the bowels regulated, they had previously been irregular. In another case a moderate attack of malarial fever which had resisted home (native) remedies, this drug, after being administered three times in 24 hours, brought the temperature down 101°F to 99·5° next morning, but the bowels became loose for a couple of days. This looseness was regulated by diminishing the frequency of the administration. In this case the fever did not return beyond an evening rise of 99°F for a week. Subsequently it came to normal and remained there till discharge. (**Rept. Indigenous Drugs Com. p. 36.**)

In the second report of the Indigenous Drugs Committee, p. 29 it is stated that—

"The drug has already been admitted into the **Indian and Colonial Addendum** of the British Pharmacopoeia. It is produced in the Himalaya."

The authors of the **Pharmacopoeia say**—

"We can state from personal observation that it is used successfully as an antiperiodic in native practice; its slight laxative action is rather beneficial than otherwise."

(Pharma. Indica, Vol. III, page 11.)

---

ಅಹೋ ಕಿಮರ್ಥಂಬಹವಃ ಕಷಾಯಾಃ ಪರಾಶರಾದ್ಯೈರ್ಮುನಿಭಿಃ ಪ್ರದಿಷ್ಟಾಃ।
ಛಿನ್ನಾ ಶಿವಾಪರ್ಪಟತೋಯಪಾನಾತ್ಪಿತ್ತಜ್ವರಃ ಕಿಂ ನ ಸರೀಸರೀತಿ ॥ ೨೩ ॥

ಪರಾಶರಾದ್ಯೈಃ – ಪರಾಶರರೇ ಮೊದಲಾದ, ಮುನಿಭಿಃ–ಋಷಿಗಳಿಂದ, ಬಹವಃ–ಅನೇಕಗಳಾದ, ಕಷಾಯಾಃ–ಕಷಾಯುಗಳು, ಕಿಮರ್ಥಂ - ಏತಕ್ಕೋಸ್ಕರವಾಗಿ, ಪ್ರದಿಷ್ಟಾಃ - ಹೇಳಲ್ಪಟ್ಟವು? ಛಿನ್ನಾ–ಅಮೃತವಳ್ಳಿ, ಶಿವಾ- ಅಳಲೇಕಾಯಿ, ಪರ್ಪಟ- ಪರ್ಪಾಷ್ಟಕ ಇವುಗಳ, ತೋಯ - ಕಷಾಯದ, ಪಾನಾತ್ - ಕುಡಿಯೋಣದರ ದೆಸೆಯಿಂದ, ಪಿತ್ತಜ್ವರಃ - ಪಿತ್ತಜ್ವರವು, ನಸರೀಸರೀತಿಕಿಂ? - ಅತಿಶಯದಿಂದೋಡಿಹೋಗುವದಿಲ್ಲವೇ ಏನು ?

ತಾತ್ಪರ್ಯ.—ಚನ್ನಾಗಿ ನಾಶವಾಗುವದು.

ಜಲಜಲಜಲವಾಹರೇಣುವಿಶ್ವೌಷಧ ಶಿಶಿರೈಃಸಹಿತಂಷಡಂಗವೇತತ್ ।
ಸಪದಿಸುಖಕರಂಸದಾಸದಾಹಜ್ವರತೃಷಿಯೋಜ್ಯಮಿದಂನವಜ್ವರೇಪಿ ॥ ೨೪ ॥

ತರುಣಜ್ವರ ದಾಹಕ್ಕೆ (ಮುಡಿವಾಳದ ಕಷಾಯು)

ಜಲ - ಮುಡಿವಾಳ, ಜಲ - ಲಾಮಂಚ, ಜಲವಾಹ - ಕೊನ್ನಾರಿಗೆಡ್ಡೆ, ರೇಣು - ಪರ್ಪಾಷ್ಟಕ; ವಿಶ್ವೌಷಧ - ಸುಂಟಿ ಇವುಗಳಿಂದ, ಸಹಿತಂ - ಕೂಡಿದ, ಷಡಂಗಂ - ಷಡಂಗವೆಂಬ ಹೆಸರುಳ್ಳ, ಏತತ್ - ಈ ಕಾದಾರಿದ ಕಷಾಯುವು, ಸಪದಿ–ಪಾನಮಾಡಿದ ಕ್ಷಣವಲ್ಲಿ, ಸುಖಕರಂ-ಸಂತೋಷವನ್ನುಂಟುಮಾಡುತಲಿರುವದು. ಸದಾ–ಎಲ್ಲಾಕಾಲದಲ್ಲಿಯೂ, ಸದಾಹಜ್ವರತೃಷಿ:ಸದಾಹಜ್ವರ-ನ್ವೈಯುರಿಜ್ವರಗಳೊಡನೆ ಸೇರಿದ, ತೃಷಿ - ತೃಷ್ಣಾಜಾಡ್ಯದಲ್ಲಿ, ಯೋಜ್ಯಂ - ಪ್ರಯೋಗಿಸತಕ್ಕದ್ದು. ಇದಂ - ಈಯೌಷಧವು, ನವಜ್ವರೇಪಿ - ತರುಣಜ್ವರವಲ್ಲಿಯೂ, ಯೋಜ್ಯಂ - ಪ್ರಯೋಗಿಸತಕ್ಕದ್ದು.

ಪಯೋಜಲಪಯಶ್ಶೀತ ಶುಂಠೀರೇಣುಪಯೋಮುಚಾಂ ।
ಷಡಂಗಂಶ್ರತಶೀತಂ ಸ್ಯಾತ್ಸದ್ಯಸ್ತೃಷ್ಣಾವಿನಾಶನಂ ॥ ೨೫ ॥

ಜಲಪಯಶ್ಶೀತಶುಂಠೀರೇಣುಪಯೋಮುಚಾಂ : ಜಲ–ಮುಡಿವಾಳ,

ಷಡಂಗಕ್ವಾಥ

ಪಯಃ - ಲಾಮಂಚ, ಶೀತ - ರಕ್ತಚಂದನ, ಶುಂಠೀ - ಸುಂಟಿ, ರೇಣು - ಪರ್ಪಾಟ್ಟಕ, ಪಯೋಮುಚಾಂ - ಕೊನ್ನಾರಿಗೆಡ್ಡೆ ಇವುಗಳ, ಶೃತಶೀತಂ - ಕಾದಾರಿದ, ಷಡಂಗ - ಷಡಂಗವೆಂಬ ಹೆಸರುಳ್ಳ, ಪಯಃ - ಕಷಾಯವು, ಸದ್ಯಃ - ಪಾನ ಮಾಡಿದ ಕ್ಷಣದಲ್ಲಿ, ತೃಷ್ಣಾವಿನಾಶನಂ : ತೃಷ್ಣಾ-ತೃಷ್ಣಾಜಾಡ್ಯಕ್ಕೆ, ವಿನಾಶನಂ—ನಾಶಕವಾದಂಥಾದ್ದು, ಸ್ಯಾತ್—ಆದೀತು.

ಲೋಹಿತಚಂದನಪದ್ಮಕಧಾನ್ಯಛಿನ್ನರುಹಾಪಿಚುಮಂದಕಷಾಯಃ ।
ಪಿತ್ತಕಫಜ್ವರದಾಹಪಿಪಾಸಾ ವಾಂತಿವಿನಾಶಹುತಾಶಕರಸ್ಸ್ಯಾತ್ ॥ ೨೬ ॥

ಕಫಪಿತ್ತಜ್ವರಕ್ಕೆ (ರಕ್ತಚಂದನ ಕಷಾಯ)

ಲೋಹಿತಚಂದನ - ರಕ್ತಚಂದನವು, ಪದ್ಮಕ - ಪದ್ಮಕವು, ಧಾನ್ಯ - ಕೊತ್ತುಂಬರೀಬೀಜವು, ಛಿನ್ನರುಹಾ-ಅಮೃತವಳ್ಳಿಯು, ಪಿಚುಮಂದ-ಬೇವಿನಪಟ್ಟೆಯು, ಇವುಗಳ, ಕಷಾಯಃ- ಕಷಾಯವು, ಪಿತ್ತಕಫಜ್ವರ - ಪಿತ್ತಜ್ವರ ಶ್ಲೇಷ್ಮಜ್ವರಗಳು, ದಾಹ - ಮೈಯುರಿಯು, ಪಿಪಾಸಾ - ನೀರಡಿಕೆ, ವಾಂತಿ - ವಮನವು, ಇವುಗಳ, ವಿನಾಶ - ನಾಶವನ್ನು, ಹುತಾಶ - ಅಗ್ನಿಬಲವನ್ನು, ಕರಃ - ಮಾಡುತಲಿರುವದು, ಸ್ಯಾತ್ - ಆದೀತು.

ಗುಡೂಚೀಪದ್ಮಕಾರಿಷ್ಟ ಧಾನ್ಯಾಕಂ ರಕ್ತಚಂದನಂ ।
ಪಿತ್ತಶ್ಲೇಷ್ಮಜ್ವರಛರ್ದಿ ದಾಹತೃಷ್ಣಾಘ್ನಮಗ್ನಿಕೃತ್ ॥

ಎಂದಷ್ಟಾಂಗಹೃದಯದಲ್ಲಿ ಹೇಳಿದೆ.

ಸಹಸ್ರಧೌತೇನ ಘೃತೇನ ಸಿಕ್ತದೇಹಸ್ಯ ದಾಹಃ ಕೃಶತಾಂ ಬಿಭರ್ತಿ ।
ಅನ್ಯಾಂಗನಾಸಂಗಮಸಾದರಸ್ಯ ಸ್ವೀಯೇಷುದಾರೇಷು ಯಥಾಭಿಲಾಷಃ ॥ ೨೭ ॥

ಪಿತ್ತಜ್ವರತಾಪಕ್ಕೆ (ಸಹಸ್ರಧೌತ ಘೃತಲೇಪ)

ಅನ್ಯಾಂಗನಾ - ಪರಸ್ತ್ರೀಯು, ಸಂಗಮ - ಸಮಾಗಮದಲ್ಲಿ, ಸಾದರಸ್ಯ - ಕುತೂಹಲವುಳ್ಳ ಪುರುಷನ, ಅಭಿಲಾಷಃ - ಇಚ್ಛೆಯು, ಯಥಾ - ಹೇಗೆ, ಸ್ವೀಯೇಷು - ಸ್ವಕೀಯಳಾದ, ದಾರೇಷು - ಪತ್ನೀವಿಷಯದಲ್ಲಿ, ಕೃಶತಾಂ - ಕಾರ್ಶ್ಯವನ್ನು, ಬಿಭರ್ತಿ - ಧರಿಸುತಲಿದೆಯೋ, ತಥಾ - ಹಾಗೆ, ಸಹಸ್ರಧೌತೇನ - ಸಾವಿರಸಲ ತೊಳೆದ, ಘೃತೇನ - ತುಪ್ಪ

ದಿಂದ, ಸಿಕ್ತ - ನೆನಸಲ್ಪಟ್ಟ, ದೇಹಸ್ಯ - ಶರೀರವುಳ್ಳ ಪುರುಷನ, ದಾಹಃ - ನೈಯುರಿಯು, ಕೃಶತಾಂ—ಕಾರ್ಶ್ಯವನ್ನು, ಬಿಭರ್ತಿ - ಧರಿಸುತಲಿದೆ.

ತೃಡ್ದಾಹಮೋಹಾಃ ಪ್ರಶಮಂ ಪ್ರಯಾಂತಿ ನಿಂಬಪ್ರವಾಳೋತ್ಥಿತಫೇನಲೇಪಾತ್।
ಯಥಾ ನರಾಣಾಂ ಧನಿನಾಂ ಧನಾನಿ ಸಮಾಗಮಾದ್ವಾರವಿಲಾಸಿನೀನಾಂ॥೨೮॥

ಧನಿನಾಂ - ಧನಿಕರಾದ, ನರಾಣಾಂ - ಮನುಷ್ಯರ, ಧನಾನಿ— ದ್ರವ್ಯಗಳು, ವಾರವಿಲಾಸಿನೀನಾಂ - ವೇಶ್ಯಾಸ್ತ್ರೀಯರುಗಳ, ಸಮಾಗ ಮಾತ್—ಸಂಯೋಗದದೆಸೆಯಿಂದ, ಯಥಾ - ಹೇಗೆ, ಪ್ರಶಮಂ—ನಾಶ ವನ್ನು, ಪ್ರಯಾಂತಿ - ಹೊಂದುತಲಿವೆಯೋ, ತಥಾ - ಹಾಗೆ, ತೃಡ್ದಾಹ ಮೋಹಾಃ: ತೃಟ್ - ಬಾಯಾರಿಕೆ, ದಾಹ - ನೈಯುರಿ, ಮೋಹಾಃ - ಅಜ್ಞಾನ, ಇವು, ನಿಂಬಪ್ರವಾಳ - ಬೇವಿನ ಚಿಗುರುಗಳಿಂದ, ಉತ್ಥಿತ - ಹುಟ್ಟಿದ, ಫೇನ - ನೊರೆಯು, ಲೇಪಾತ್ - ಲೇಪದದೆಸೆಯಿಂದ, ಪ್ರಶಮಂ - ಶಾಂತಿಯನ್ನು, ಪ್ರಯಾಂತಿ - ಹೊಂದುತಲಿವೆ.

ಬದರೀಪಲ್ಲವೋತ್ಥೇನಫೇನೇನಾರಿಷ್ಟಜೇನವಾ ॥

ಎಂದು ಬಾಹಟದಲ್ಲಿ ಹೇಳಿದೆ.

ಅಮಲೈಃ ಕಮಲೈರಥಾನಿಲೈರಲಸೈಃ ಪುಷ್ಪರಜಸ್ಸಮನ್ವಿತೈಃ ।
ವನಕೇಳಿಕಥಾಕುತೂಹಲೈರಪಿ ಪಿತ್ತಜ್ವರಜಾರುಜೋಜಯೇತ್ ॥ ೨೯ ॥

ಪಿತ್ತಜ್ವರಕ್ಕೆ (ಮಕರಂದಸೇವನೆ)

ಅಮಲೈಃ - ನಿರ್ಮಲಗಳಾದ, ಕಮಲೈಃ - ತಾವರೆಹೂವುಗಳಿಂದಲೂ, ಅಥ - ಇಲ್ಲವೆ, ಅಲಸೈಃ - ಮಂದಗಳಾಗಿಯೂ, ಪುಷ್ಪ ರಜಸ್ಸಮನ್ವಿತೈಃ: ಪುಷ್ಪರಜಃ - ಹೂವಿನ ಧೂಳುಗಳೊ ಡನೆ, ಸಮನ್ವಿತೈಃ - ಕೂಡಿದವಾಗಿಯೂ ಇರುವ, ಅನಿಲೈಃ - ವಾಯುಗಳಿಂದಲೂ, ವನಕೇಳಿಕಥಾಕುತೂ ಹಲೈಃ: ವನಕೇಳಿ - ವನವಿಹಾರದ, ಕಥಾ - ವೃತ್ತಾಂತದ, ಕುತೂಹಲೈ ರಪಿ - ಆಸಕ್ತಿಗಳಿಂದಲೂ, ಪಿತ್ತಜ್ವರಜಾಃ—ಪಿತ್ತಜ್ವರದಲ್ಲಿ ಹುಟ್ಟಿದ, ರುಜಃ— ಉಪದ್ರವಗಳನ್ನು, ಜಯೇತ್—ಜಯಿಸಬೇಕು.

ಶ್ರೀಖಂಡಮಂಡಿತ ಕಳೇಬರವಲ್ಲರೀಣಾಂ
ಮುಕ್ತಾಫಲಾಕುಲ ವಿಶಾಲ ಕುಚಸ್ಥಳೀನಾಂ।
ವೈದಗ್ಧ್ಯಮುಗ್ಧವಚಸಾಂ ಸುವಿಲಾಸಿನೀನಾ
ಮಾಲಿಂಗನಂ ಸಕಲದಾಹಮಪಾಕರೋತಿ ॥ ೩೦ ॥

ಸ್ತ್ರೀಸೇವನಾದಿ ವಿವಿಧೋಪಚಾರಗಳು.

ಶ್ರೀಖಂಡಮಂಡಿತಕಳೇಬರವಲ್ಲರೀಣಾಂ- ಚಂದನಲೇಪದಿಂದಲಂಕರಿಸಲ್ಪಟ್ಟ ಶರೀರಮಂಜರಿಯುಳ್ಳವರಾಗಿಯೂ, ಮುಕ್ತಾಫಲ-ಮುತ್ತುಗಳಿಂದ, ಆಕುಲ-ವ್ಯಾಪ್ತಗಳಾದ, ವಿಶಾಲ-ವಿಸ್ತಾರಗಳಾದ, ಕುಚಸ್ಥಳೀನಾಂ-ಸ್ತನ ಪ್ರದೇಶಗಳುಳ್ಳವರಾಗಿಯೂ, ವೈದಗ್ಧ್ಯ-ಚಾತುರ್ಯದಿಂದ, ಮುಗ್ಧ-ಶ್ರಾವ್ಯವಾದ, ವಚಸಾಂ-ಮಾತುಗಳುಳ್ಳ, ಸುವಿಲಾಸಿನೀನಾಂ-ಸುಂದರಸ್ತ್ರೀಯರ, ಆಲಿಂಗನಂ-ಆಲಿಂಗನೆಯು, ಸಕಲದಾಹಂ: ಸಕಲ-ಸಮಸ್ತವಾದ, ದಾಹಂ-ಮೈಯುರಿಯನ್ನು, ಅಪಾಕರೋತಿ-ತಿರಸ್ಕರಿಸುತಲಿದೆ.

ತಾತ್ಪರ್ಯ.—ಕಟಾಕ್ಷಭ್ರೂವಿಕ್ಷೇಪ ಕಕ್ಷನಾಭಿ ಪ್ರದರ್ಶನಾದ್ಯನುಭಾವಗಳುಳ್ಳವರಾಗಿಯೂ, ಸರ್ವಾಭರಣಭೂಷಿತರಾಗಿಯೂ ಇರುವ, ಸುಂದರಿಯರ ಆಲಿಂಗನೆಯು ಎಲ್ಲಾ ದಾಹಗಳನ್ನು ತಿರಸ್ಕರಿಸೀತು.

ಶಯ್ಯಾಪಲ್ಲವಪದ್ಮಪತ್ರರಚಿತಾವಾಸೋ ವಯಸ್ಯೈಸ್ಸಮಂ
ಕಾಂತಾರೇಕುಸುಮಸ್ಫುರತ್ತರುವರೇ ವಾಪೀಜಲಾಲೋಕನಂ।
ಆಲಾಪಾಶ್ಚ ಶುಕಾಳಿಕೋಕಿಲಕೃತಾಃ ಕಾಂತಾಶ್ಚ ಕಾಂತಾಃ
ಕಥಾವಾತಾಶ್ಚಾಮಲವಾಲಕವ್ಯಜನಜಾ ದಾಹಂ ನಿರಾಕುರ್ವತೇ ॥ ೩೧ ॥

ಪರಿಮಳವಾತ ಸೇವನ.

ಪಲ್ಲವ- ಚಿಗುರುಗಳು, ಪದ್ಮಪತ್ರ-ತಾವರೇಹೂವಿನ ದಳಗಳು, ಇವುಗಳಿಂದ, ರಚಿತಾ-ಮಾಡಲ್ಪಟ್ಟ, ಶಯ್ಯಾ-ಹಾಸಿಗೆಯು, ವಯಸ್ಯೈಸ್ಸಮಂ-ಮಿತ್ರರೊಡನೆ, ವಾಸಃ- ಕೂಡಿರೋಣವು, ಕುಸುಮ-ಪುಷ್ಪಗಳಿಂದ, ಸ್ಫುರತ್-ಪ್ರಕಾಶಿಸುತಲಿರುವ, ತರುವರೇ-ವೃಕ್ಷಶ್ರೇಷ್ಠಗಳುಳ್ಳ, ಕಾಂತಾರೇ-ಅರಣ್ಯದಲ್ಲಿ, ವಾಪೀ-ಕೊಳಗಳ, ಜಲ-ನೀರುಗಳ, ಆಲೋಕನಂ-ನೋಡೋಣವು, ಶುಕ-ಗಿಣಿಗಳು, ಅಳಿ-ದುಂಬಿಗಳು, ಕೋಕಿಲ-ಕೋಗಿಲೆಗಳು, ಇವು

ಗಳಿಂದ, ಕೃತಾಃ-ಮಾಡಲ್ಪಟ್ಟ, ಆಲಾಪಾಶ್ಚ-ಧ್ವನಿಗಳು, ಕಾಂತಾಃ-ಸ್ತ್ರೀಯರು, ಕಾಂತಾಃ-ಶ್ರಾವ್ಯಗಳಾದ, ಕಥಾಃ-ಉಪಾಖ್ಯಾನಗಳು, ಅಮಲ-ನಿರ್ಮಲಗಳಾದ, ವಾಲಕ-ಮುಡಿವಾಳ ಲಾಮಂಚಗಳ, ವ್ಯಜನ-ಬೀಸಣಿಗೆಗಳದೆಸೆಯಿಂದ, ಜಾಃ-ಹುಟ್ಟಿದ, ವಾತಃ-ಗಾಳಿಗಳು, ಇವೆಲ್ಲವು, ದಾಹಂ-ವ್ಯೆಯುರಿಯನ್ನು, ನಿರಾಕುರ್ವತೆ - ತಿರಸ್ಕರಿಸುತಲಿವೆ.

ಅಪಿ ನಿತಂಬಿನಿ ಗಾಯನಲಾಲಸೇ ಮಧುರವಾಣಿ ನಿಕಾಮಮದಾಲಸೇ ।
ವಪುಷಿ ದಾಹವತಾಂ ವಿಹಿತಂಹಿತಂ ಹಿಮಹಿಮಾಂಶುಜಲ್ಯೈ ರನುಲೇಪನಂ॥೨೨॥

ಗಾಯನಲಾಲಸೇ: ಗಾಯನ–ಗಾನಮಾಡಿಸತಕ್ಕ ವಿಷಯದಲ್ಲಿ, ಲಾಲಸೇ–ಆಸಕ್ತಳಾದ, ಮಧುರವಾಣಿ: ಮಧುರ–ಶ್ರಾವ್ಯವಾದ, ವಾಣಿ–ಮಾತುಗಳುಳ್ಳ, ನಿಕಾಮಮದಾಲಸೇ: ನಿಕಾಮ-ಅತ್ಯಂತವಾಗಿ, ಮದ–ಯೌವನಮದದಿಂದ, ಅಲಸೇ–ಮಂದಳಾದ, ಅಪಿನಿತಂಬಿನಿ–ಎಲೇ ಸ್ತ್ರೀಯೇ! ಹಿಮಹಿಮಾಂಶುಜಲೈಃ: ಹಿಮ–ಚಂದನವು, ಹಿಮಾಂಶು-ಪಚ್ಚ ಕರ್ಪೂರವು, ಜಲೈಃ–ಲಾಮಂಚವು ಇವುಗಳಿಂದ, ವಪುಷಿ–ಶರೀರದಲ್ಲಿ, ವಿಹಿತಂ-ಮಾಡಲ್ಪಟ್ಟ, ಅನುಲೇಪನಂ-ಲೇಪವು, ದಾಹವತಾಂ-ವ್ಯೆಯುಳ್ಳುರಿಯುಳ್ಳ ಪುರುಷರಿಗೆ, ಹಿತಂ-ಔಷಧವು.

ಶುಭ್ರಾಭ್ರವಿಭ್ರಮಧರೇ ಶಶಾಂಕಕರಸುಂದರೇ ।
ಚಂದನೈಶ್ಚರ್ಚಿತೇಹರ್ಮ್ಯೇ ಸ್ವಾಪಸ್ತಾಪಮಪೋಹತಿ ॥ ೨೩ ॥

ಶುಭ್ರಾಭ್ರವಿಭ್ರಮಧರೇ: ಶುಭ್ರಾಭ್ರ: ಶುಭ್ರ-ಬಿಳುಪಾದ, ಅಭ್ರ–ಮೇಘದ, ವಿಭ್ರಮ-ವಿಲಾಸವನ್ನು ಇಲ್ಲವೆ ಭ್ರಾಂತಿಯನ್ನು, ಧರೇ–ಧರಿಸುತಲಿರುವ, ಶಶಾಂಕಕರಸುಂದರೇ: ಶಶಾಂಕ–ಚಂದ್ರನ, ಕರ–ಕಿರಣಗಳಂತೆ, (ಅಥವಾ) ಕಿರಣಗಳಿಂದ. ಸುಂದರೇ–ರಮಣೀಯವಾದ, ಚಂದನೈಃ–ಗಂಧೋದಕಗಳಿಂದ, ಚರ್ಚಿತೇ–ಲೇಪಿಸಲ್ಪಟ್ಟ, ಹರ್ಮ್ಯೇ–ಮಹಡಿಯಲ್ಲಿ ಮಾಡಲ್ಪಟ್ಟ, ಸ್ವಾಪಃ-ನಿದ್ರೆಯು, ತಾಪಂ–ವ್ಯೆಯುರಿಯನ್ನು, ಅಪೋಹತಿ–ನಾಶಮಾಡುತಲಿದೆ.

ದಾತ್ರೌ ಪರ್ಯುಷಿತಂ ಧಾನ್ಯಸಲಿಲಂ ಸಿತಯಾ ಸಹ ।
ಪ್ರಭಾತಸಮಯೇಪೀತ ಮಂತರ್ದಾಹಂ ವಿನಾಶಯೇತ್ ॥ ೨೪ ॥

ರಾತ್ರೌ-ರಾತ್ರಿಯಲ್ಲಿ, ಪರ್ಯುಷಿತಂ-ಕಾಯಿಸಿಯಾರಿಸಿ ಮಡಗಲ್ಪಟ್ಟ, ಧಾನ್ಯಸಲಿಲಂ:ಧಾನ್ಯ-ಕೊತ್ತುಂಬರೀಬೀಜದ, ಸಲಿಲಂ-ಕಷಾಯವು, ಸಿತಯಾ-ಸಕ್ಕರೆಯೊಡನೆ, ಸಹ-ಕೂಡಿ, ಪ್ರಭಾತಸಮಯೇ-ಪ್ರಾತಃಕಾಲದಲ್ಲಿ, ಪೀತಂಚೇತ್-ಪಾನಮಾಡಲ್ಪಟ್ಟಿದ್ದಾದರೆ, ಅಂತಃ-ಶರೀರದೊಳಗಿರುವ, ತಾಪಂ-ಉರಿಯನ್ನು, ವಿನಾಶಯೇತ್-ಹೋಗಲಾಡಿಸೀತು.

ಕೊತ್ತುಂಬರಿ ಕಷಾಯ

ಕಷಾಯದಲ್ಲಿ ಸಕ್ಕರೆ ಮುಂತಾದವುಗಳನ್ನು ಸೇರಿಸುವ ಕ್ರಮವು :—

ಷೋಡಶಾಷ್ಟಚತುರ್ಭಾಗಂ ವಾತಪಿತ್ತಕಫಾರ್ತಿಷು ।
ಕ್ಷೌದ್ರಂಕಷಾಯೇದಾತವ್ಯಂ ವಿಪರೀತಾತುಶರ್ಕರಾ ॥

ಪ್ರಾಣಪ್ರೇಯಸಿ ಮಾಪಿಬಂತು ಪುರುಷಾಃ ಪಿತ್ತಜ್ವರವ್ಯಾಕುಲಾ
ನಾನಾವಲ್ಲಿ ಜಲಂ ವಿಳಂಬಿತಫಲಂ ಪಾನೇವಿಷಾದಪ್ರದಂ ।
ತತ್ತ್ಯೈಃ ಕಿಂ ಕ್ರಿಯತಾಂ ಚಿಕಿತ್ಸಕಪತೇ ಮುಗ್ಧೇ ಸುಖಂಸೇವ್ಯತಾಂ
ಸದ್ಯಸ್ತಾಪಹರಃಸುಧಾಧಿಕತರಃ ಕಾಂತಾಧರಃ ಕೇವಲಂ ॥ ೩೫ ॥

ಹೇಪ್ರಾಣಪ್ರೇಯಸಿ-ಎಲೇ ಪ್ರಾಣಕಾಂತೆಯೇ! ಪಿತ್ತಜ್ವರವ್ಯಾಕುಲಾಃ: ಪಿತ್ತಜ್ವರ-ಪಿತ್ತಜ್ವರದಿಂದ, ವ್ಯಾಕುಲಾಃ-ಪೀಡಿತರಾದ, ಪುರುಷಾಃ-ಮನುಷ್ಯರು, ವಿಳಂಬಿತಫಲಂ:ವಿಳಂಬಿತ-ಸಾವಕಾಶವಾದ. ಫಲಂ-ದಾಹನಾಶರೂಪಫಲವುಳ್ಳ, ಪಾನೇ-ಕುಡಿಯುತಕ್ಕ ವಿಷಯದಲ್ಲಿ, ವಿಷಾದಪ್ರದಂ-ದುಃಖವನ್ನುಂಟುಮಾಡುತಲಿರುವ, ನಾನಾವಲ್ಲಿಜಲಂ: ನಾನಾ-ಅನೇಕವಿಧಗಳಾದ, ವಲ್ಲಿ-ಓಷಧಿಗಳ, ಜಲಂ-ಕಷಾಯವನ್ನು, ಮಾಪಿಬಂತು-ಪಾನವಂಮಾಡಬೇಡ. (ಇದು ಲೋಲಂಬರಾಜನ ವಚನಗಳು.) ಹೇಚಿಕಿತ್ಸಕಪತೇ-ಎಲೈ ವೈದ್ಯಶ್ರೇಷ್ಠನೇ! ತತ್-ಹಾಗಾದಪಕ್ಷದಲ್ಲಿ, ತೈಃ-ಆಪಿತ್ತಜ್ವರಾತುರರಿಂದ, ಕಿಂ-ಯಾವಕಾರ್ಯವು, ಕ್ರಿಯತಾಂ-ಮಾಡಲ್ಪಡತಕ್ಕದ್ದು ?(ಇದು ರತ್ನಕಳೆಯ ಪ್ರಶ್ನೆಯು.)ಹೇಮುಗ್ಧೇ-ಎಲೇ ವೈದ್ಯಶಾಸ್ತ್ರವಂ ತಿಳಿಯದವಳೇ! ಸದ್ಯಃ-ಪಾನಮಾಡಿದಕ್ಷಣದಲ್ಲಿ, ತಾಪ-ಉರಿಯನ್ನು, ಹರಃ-ನಾಶಮಾಡುತಲಿರುವ, ಸುಧಾ-ಅಮೃತಕ್ಕಿಂತ, ಅಧಿಕತರಃ-ಅತ್ಯಂತಶ್ರೇಷ್ಠ

ಪಿತ್ತಜ್ವರಕ್ಕೆ ವಿವಿಧೋಪಚಾರಗಳು

The ripe fruit is considered laxative, and therefore much prized by persons labouring under habitual constipation. The bark and kernel are known as astringent and used in haemorrhage, diarrhoea and other discharges. The decoction of the kernel, either alone or in combination with **bel** and ginger, is generally prescribed in diarrhoea. The juice of the kernel, if snuffed, can stop nasal bleeding. The kernel is also described in the *Indian Pharmacopoeia* as an anthelmentic and containing a large quantity of gallic acid, highly useful in bleeding piles and menorrhagia.

Mango bark and fruit have been lately introduced by **Dr. Linguist** as a medicine in Europe; he recommends it for its extraordinary action in cases of haemorrhage from the uterus, lungs or intestines **(Dymock).**

A native article of diet, known as *amchur* or *ambosi* (Bom.) is made of green mangoes which have been skinned, their stones removed and the pulp cut up into pieces and dried in the sun, is recommended by the Inspector-General of Prisons, North-Western Provinces and Oudh, as a good and cheap antiscorbutic for native troops (**Dr. Emerson**).

The flowers of the mango are used either in the form of tea or powder for catarrh of the bladder. The powder is also used in the form of fumigation against mosquitoes. (**Brazilian Drugs, Ph. J., Oct. 25, 1884.**)

Introduced into America in the form of fluid extract, either from the fruit or the rind. Astringent with a specific

tonic action on mucous membranes. Its effects are great in diphtheria and other malignant throat diseases. The fluid extract applied locally is very useful in haemorrhages (**I.M.G., February 1883, p. 56**).

---

ಅಯಿಕಂದುಕನಿಂದಕಸ್ತನಿ ಪ್ರಮದಾರೂಪಮದಾಪಹಾರಿಣಿ ।
ರುಧಿರಾತಿಸೃತೌ ಕಷಾಯಕಃ ಸಮಧುರ್ದಾಡಿಮವತ್ಸಕತ್ವಚಃ ॥ ೯೪ ॥

**ರಕ್ತಾತಿಸಾರದಲ್ಲಿ ದಾಡಿಮಾದಿ ಕಷಾಯ**

ಕಂದುಕನಿಂದಕಸ್ತನಿ–ಚಂಡುಗಳಿಗೆ ದೂಷಕಗಳಾದ ಮೊಲೆಗಳುಳ್ಳ, (ಅಂದರೆ) ಚಂಡುಗಳಿಗಿಂತ ಸುಂದರಗಳಾದ ಮೊಲೆಗಳುಳ್ಳವಳೆಂದಭಿಪ್ರಾಯವು. ಪ್ರಮದಾರೂಪಮದಾಪಹಾರಿಣೀ–ತನ್ನ ಲಾವಣ್ಯಾದಿಂದಿತರ ಸ್ತ್ರೀಯರ ಸೌಂದರ್ಯ್ಯದಿಂದುಂಟಾದ ಗರ್ವವನ್ನಪಹರಿಸುತಲಿರುವ, ಅಯಿ–ಎಲೆ ಸ್ತ್ರೀಯೇ! ಸಮಧುಃ–ಜೇನುತುಪ್ಪದೊಡನೆ ಕೂಡಿದ, ದಾಡಿಮವತ್ಸಕತ್ವಚಃ–ದಾಳಿಂಬೆಚಕ್ಕೆ, ಕೊಡಸಿಗೆಚಕ್ಕೆಗಳ, ಕಷಾಯಕಃ–ಕಷಾಯವು, ರುಧಿರಾತಿಸೃತೌ – ರಕ್ತಾತಿಸಾರಜಾಡ್ಯದಲ್ಲಿ, ಪ್ರಯೋಜ್ಯಃ–ಉಪಯೋಗಿಸತಕ್ಕದ್ದೆಂದಭಿಪ್ರಾಯವು.

ಚಂದನಂ ವಿಮಲತಂಡುಲಾಂಬುನಾ ಸಂಯುತಂ ಮಧುಯುತಂ ಸಿತಾಯುತಂ ।
ತೃಡ್ವಿಖಂಡನಮಸೃಗ್ವಿಖಂಡನಂ ಖಂಡನಂ ಪ್ರಚುರದಾಹಮೋಹಯೋಃ ॥ ೯೫ ॥

**ರಕ್ತಚಂದನದ ಪ್ರಯೋಗ**

ವಿಮಲತಂಡುಲಾಂಬುನಾ–ನಿರ್ಮಲವಾದ ಕಲಗಚ್ಚಿನೊಡನೆ. ಸಂಯುತಂ–ಕೂಡಿದ, ಮಧುಯುತಂ–ಜೇನುತುಪ್ಪದೊಡನೆ ಕೂಡಿದ, ಸಿತಾಯುತಂ–ಸಕ್ಕರೆಯೊಡನೆ ಕೂಡಿದ, ಚಂದನಂ–ರಕ್ತಚಂದನವು, ತೃಡ್ವಿಖಂಡನಂ–ನೀರಡಿಕೆಯನ್ನು ನಾಶಮಾಡುತಲಿದೆ, ಅಸೃಗ್ವಿಖಂಡನಂ-ರಕ್ತಾತಿಸಾರವಂ ನಾಶಮಾಡುತಲಿದೆ, ಪ್ರಚುರದಾಹಮೋಹಯೋಃ–ಪ್ರಬಲತರಗಳಾದ ಮೈಯುರಿ, ಪ್ರಮೇಹಜಾಡ್ಯಗಳಿಗೆ, ಖಂಡನಂ–ನಾಶಕವಾದದ್ದು.

ಕುಕ್ಷಿಶೂಲಾಮಶೂಲಘ್ನಂ ವಿಬಂಧಾಸ್ರಾತಿಸಾರಜಿತ್ ।
ಸೇವೇತಸಗುಡಂಬಿಲ್ವಂ ಬಿಲ್ವತುಲ್ಯಪಯೋಧರೇ ॥ ೯೬ ॥

ಹೇಬಿಲ್ವತುಲ್ಯಪಯೋಧರೆ—ಬಿಲ್ವದಹಣ್ಣುಗಳಿಗೆ ಸದೃಶಗಳಾದ ಕುಚಗಳುಳ್ಳ ಸ್ತ್ರೀಯೇ! ಕುಕ್ಷಿಶೂಲಾಮಶೂಲಘ್ನಂ—ಹೊಟ್ಟೆ ನೋವು ಅಜೀರ್ಣಶೂಲೆಗಳನ್ನು ನಾಶಮಾಡುತಲಿರುವ, ವಿಬಂಧಾಸ್ರಾತಿಸಾರಜಿತ್—ಮಲಬಂಧ ರಕ್ತಾತಿಸಾರಗಳನ್ನು ನಾಶಮಾಡುತಲಿರುವ, ಸಗುಡಂ—ಬೆಲ್ಲದೊಡನೆಕೂಡಿದ, ಬಿಲ್ವಂ-ಬಿಲ್ವಪತ್ರೆಯನ್ನು, (ಅಥವಾ) ಆದರ ಹೀಚನ್ನು, (ಇಲ್ಲವೆ) ಆದರ ಹಣ್ಣಿನ ತಿರುಳನ್ನು, ಸೇವೇತ—ಸೇವಿಸಬೇಕು.

ಬಿಲ್ವಸೇವನೆ

ತೃಟ್ಶ್ವಾಸಕಾಸಜ್ವರಶೋಫಮೂರ್ಛಾಹಿಕ್ಕಾನ್ನವಿದ್ವೇಷಣವಾಂತಿಶೂಲೈಃ ।
ಯುಕ್ತೋತಿಸಾರೀಸ್ಮರತುಪ್ರಸಹ್ಯ ಗೋವಿಂದಗೋಪಾಲಗದಾಧರೇತಿ ॥ ೯೭ ॥

ತೃಟ್—ನೀರಡಿಕೆ, ಶ್ವಾಸ—ಉಬ್ಬಸಜಾಡ್ಯ, ಕಾಸ—ಕೆಮ್ಮು, ಜ್ವರ—ಜ್ವರವು, ಶೋಫ—ವೈಯೂದು, ಮೂರ್ಛಾ—ಮೂರ್ಛೆಯು, ಹಿಕ್ಕಾ—ಬಿಕ್ಕಳಿಕೆ, ಅನ್ನವಿದ್ವೇಷಣ—ಅನ್ನದ್ವೇಷವು, ವಾಂತಿ—ವಮನವು, ಶೂಲೈಃ—ನೋವು, ಇವುಗಳಿಂದ, ಯುಕ್ತಃ-ಕೂಡಿದ, ಅತಿಸಾರೀ-ಅತಿಸಾರ ಜಾಡ್ಯದವನು, ಪ್ರಸಹ್ಯ—ಬಲಾತ್ಕರಿಸಿ, ಗೋವಿಂದ, ಗೋಪಾಲ, ಗದಾಧರ, ಇತಿ—ಈಪ್ರಕಾರವಾಗಿ, ಸ್ಮರತು—ಸ್ಮರಿಸಲಿ.

ತಾತ್ಪರ್ಯ.—ಹಿಂದೆ ಹೇಳಿದುಪಜಾಡ್ಯಗಳೊಡನೆ ಕೂಡಿದತಿಸಾರ ಜಾಡ್ಯದವನು ಕೃಷ್ಣನನ್ನು ಸ್ಮರಿಸಲಿ.

## ಗ್ರಂಥಾಂತರವಲ್ಲಿ

ಜಾತೀಫಲಂನಾಗರಸರ್ಪಫೇನೌ ಖರ್ಜೂಫಲಂಭಿನ್ನಮಿದಂಚನಿತ್ಯಂ ।
ಯೋಜ್ಯಂದ್ವಿನಿಷ್ಕಂಚಕರೀಷಜಾತಾದರಣ್ಯಜಾದ್ಭಸ್ಮಸಮಂಚಸರ್ವೈಃ ॥
ನಿಷ್ಕಾರ್ಧಮಾತ್ರಂಭಿಷಜಾಪ್ರಯೋಜ್ಯಂದ್ವಿವಾರಮೇತಚ್ಚುಭತಂಡುಲೋದಕೈಃ ।
ಜೀರ್ಣಾತಿಸಾರೇರುಧಿರಾಮಯುಕ್ತೇಹಿತಂಸರೂಜೇ ಬಹುವೇಗಯುಕ್ತೇ ॥

ಭಿನ್ನಂ—ಪುಡಿಮಾಡಿದ, ಜಾತೀಫಲಂ—ಜಾಕಾಯಿ, ನಾಗರಸರ್ಪಫೇನೌ—ಸುಂಟಿ, ಅಫಿನೀಮುದ್ದುಗಳು, ಖರ್ಜೂರಫಲಂ—ಖರ್ಜೂರವು, ಇದಂ—ಇವೆಲ್ಲವು, ದ್ವಿನಿಷ್ಕಂ—ಎರಡು ಪಲಗಳತೂಕ (ಅಂದರೆ ಆರು ರೂಪಾಯಿಗಳತೂಕ), ಯೋಜ್ಯಂ—ಸೇರಿಸತಕ್ಕದ್ದು. ಅರಣ್ಯಜಾತ್—ಕಾಡಿನಲ್ಲಿಪುಟ್ಟಿದ, ಕರೀಷಜಾತಾತ್—ಬೆರಣಿಗಳ ಗುಂಪಿನದೆಸೆಯಿಂದುಂಟಾದ, ಭಸ್ಮ—ಬೂದಿಯು, ಸರ್ವೈಃ—ಇವೆಲ್ಲಗಳೊಡನೆ, ಸಮಂ—ಸಮತೂಕವಾಗಿ, ಅಂದರೆ ಇಪ್ಪತ್ತುನಾಲ್ಕುರೂಪಾಯಿಗಳತೂಕ, ಯೋಜ್ಯಂ—ಸೇರಿಸತಕ್ಕದ್ದು. ಏತತ್—ಈ ಚೂರ್ಣವು, ನಿತ್ಯಂ—ಪ್ರತಿದಿವಸದಲ್ಲಿಯೂ, ದ್ವಿವಾರಂ—ಎರಡು ಸಲ, ನಿಷ್ಕಾರ್ಧಮಾತ್ರಂ—ಒಂದುವರೆ ರೂಪಾಯಿತೂಕ, ಶುಭತಂಡುಲೋದಕೈಃ—ಒಳ್ಳೇಕಲಗಚ್ಚುಗಳೊಡನೆ, ಭಿಷಜಾ—ವೈದ್ಯನಿಂದ, ಪ್ರಯೋಜ್ಯಂ—ಪ್ರಯೋಗಿಸತಕ್ಕದ್ದು. ರುಧಿರಾಮಯುಕ್ತೇ—ರಕ್ತ ಆಮರಸಗಳೊಡನೆ ಕೂಡಿದ, ಸಶೂಲೇ – ಹೊಟ್ಟೇನೋವುಗಳೊಡನೆ ಕೂಡಿದ, ಬಹುವೇಗಯುಕ್ತೇ – ಅತಿವೇಗದೊಡನೆ ಕೂಡಿದ, ಜೀರ್ಣಾತಿಸಾರೇ-ಜೀರ್ಣಾವಸ್ಥೆಯಂ ಹೊಂದಿದ ಅತಿಸಾರಜಾಡ್ಯದಲ್ಲಿ, ಹಿತಂ—ಆರೋಗ್ಯಕರವಾದದ್ದು.

ಜಾತೀಫಲಾದಿ ಚೂರ್ಣವು

ಸಾಷ್ಟೇಶತೇಸುವರ್ಣಾನಾಂಹೇಮ್ನ್ಯುರೋಭೂಷಣೇಫಲೇದೀನಾರೇ ಪಿಚನಿಷ್ಕೋಸ್ತ್ರೀತ್ಯಮರಃ ॥

## ಅಥಗ್ರಹಣೀ ಚಿಕಿತ್ಸಾ.

ಯವಾನೀನಾಗರೋಶೀರಧನಿಕಾತಿವಿಷಾಘನೈಃ ।
ಬಾಲಬಿಲ್ವದ್ವಿಪರ್ಣೀಭಿ ರ್ದೀಪನಂಪಾಚನಂಭವೇತ್ ॥ ೯೮ ॥

ಯವಾನೀ—ಓಮು, ನಾಗರ—ಸುಂಟಿ, ಉಶೀರ—ಲಾಮಂಚ, ಧನಿಕಾ—ಕೊತ್ತುಂಬರೀಬೀಜ, ಅತಿವಿಷಾ—ಅತಿಬಜೆ, ಘನೈಃ—ಕೊನ್ನಾರೆಗೆಡ್ಡೆ ಇವುಗಳಿಂದಲೂ, ಬಾಲಬಿಲ್ವ—ಬಿಲ್ವದ ಹೀಚು, ದ್ವಿಪರ್ಣೀಭಿಃ—ಒಂದೆಲೆಹೊನ್ನೆ, ಮೂರೆಲೆ ಹೊನ್ನೆಗಳು ಇವುಗಳಿಂದಲೂ ಸಹ ಉಂಟಾದ ಚೂ

ಯವಾನ್ಯಾದಿ ಚೂರ್ಣ

ರ್ಣವು, ದೀಪನಂ–ಅಗ್ನಿದೀಪ್ತಿಯನ್ನುಂಟು ಮಾಡತಕ್ಕದ್ದು. ಪಾಚನಂ–ಆಮರಸವನ್ನು ಪಚನಮಾಡತಕ್ಕದ್ದು, ಭವೇತ್–ಆದೀತು.

ಗ್ರಹಣೀಮಾಶ್ರಿತಂದೋಷಮಜೀರ್ಣವದುಪಾಚರೇತ್ ।
ತತ್ರಾಪ್ಯೇಲಂಘನಂಪಥ್ಯಂಮಥ್ಯೇದೀಪನಪಾಚನಂ ॥
ಪ್ರಭೂತೇಶೋಧನಂತದ್ಧಿಮೂಲಾದುನ್ಮೂಲಯೇನ್ಮಲಾನ್ ॥

ಎಂಬ ವಚನಗಳ ಬಲದಿಂದ ಗ್ರಹಣೀಚಿಕಿತ್ಸೆಯಲ್ಲಿ ದೀಪನಪಾಚನೌಷಧವು ಹೇಳಲ್ಪಟ್ಟಿತೆಂದು ತಿಳಿಯಬೇಕು.

ಪುನರ್ನವಾವೆಲ್ಲಜಬಾಣಪುಂಖಾ ವಿಶ್ವಾಗ್ನಿಪಥ್ಯಾಚಿರಬಿಲ್ವಬಿಲ್ವೈಃ ।
ಕೃತಃಕಷಾಯಶ್ಶಮಯೇದಶೇಷಾನ್ ದುರ್ನಾಮಗುಲ್ಮಗ್ರಹಣೀವಿಕಾರಾನ್ ॥೯೯॥

ಪುನರ್ನವಾದಿಕ್ವಾಥ

ಪುನರ್ನವಾ–ಕೊಮ್ಮೆ, ವೆಲ್ಲಜ–ಮೆಣಸು, ಬಾಣಪುಂಖಾ–ಕೊಗ್ಗಿ, ವಿಶ್ವ–ಸುಂಟಿ, ಅಗ್ನಿ–ಚಿತ್ರಮೂಲ, ಪಥ್ಯಾ–ಅಳಲೇಕಾಯಿ, ಚಿರಬಿಲ್ವ–ಹೊಂಗೆ, ಬಿಲ್ವೈಃ–ಬಿಲ್ವಪತ್ರೆ, ಇವುಗಳಿಂದ, ಕೃತಃ–ಮಾಡಲ್ಪಟ್ಟ, ಕಷಾಯಃ–ಕಷಾಯವು, ಅಶೇಷಾನ್–ಸಮಸ್ತಗಳಾದ, ದುರ್ನಾಮಗುಲ್ಮಗ್ರಹಣೀವಿಕಾರಾನ್–ಮೂಲವ್ಯಾಧಿ, ಗೆಡ್ಡೆ, ಗ್ರಹಣೀರೋಗಗಳನ್ನು, ಶಮಯೇತ್–ನಾಶಮಾಡೀತು.

ಶುಂಠೀಛಿನ್ನರುಹಾವಿಷಾಜಲಧರೈಸ್ತುಲ್ಯೈಃ ಕಷಾಯಃಕೃತೋ
ಮಂದಾಗ್ನೌ ಗ್ರಹಣೀಗದೇಪಿ ಸತತಂ ಸಾಮಾನುಬಂಧೇಹಿತಃ ।
ಶುಂಠೀಕಲ್ಕಶೃತಂಘೃತಂಪ್ರಪಿಬತಃಪ್ಲೀಹಾಮವಾತಾಪಹಂ
ಸ್ಯಾದ್ವಾಯೋರನುಲೋಮನಂಗ್ರಹಣಿಕಾವೇಗೇನಜಂಗಮ್ಯತೇ ॥ ೧೦೦ ॥

ಶುಂಠೀ ಕಷಾಯ ಮತ್ತು ಘೃತ

ತುಲ್ಯೈಃ–ಸಮತೂಕಗಳಾದ, ಶುಂಠೀ–ಸುಂಟಿಯು, ಛಿನ್ನರುಹಾ–ಅಮೃತವಳ್ಳಿಯು, ವಿಷಾ–ಅತಿಬಜೆ, ಜಲಧರೈಃ–ಕೊನ್ನಾರೆಗೆಡ್ಡೆ ಇವುಗಳಿಂದ, ಕೃತಃ–ಮಾಡಲ್ಪಟ್ಟ, ಕಷಾಯಃ–ಕಷಾಯವು, ಮಂದಾಗ್ನೌ–ಮಂದಾಗ್ನಿಯಲ್ಲಿ. ಸಾಮಾನುಬಂಧೇ–ಆಮರಸಸಂಬಂಧದೊಡನೆ ಕೂಡಿದ, ಗ್ರಹಣೀಗದೇಪಿ–ಗ್ರಹಣೀಜಾಡ್ಯದಲ್ಲೂಕೂಡ, ಸತತಂ–ನಿರಂತರದಲ್ಲಿಯೂ, ಹಿತಃ–ಇಷ್ಟವಾದದ್ದು. ಪ್ಲೀಹಾಮವಾತಾಪಹಂ–ಪ್ಲೀಹ ರೋಗ

ಆಮವಾಯುಗಳನ್ನು ನಾಶಮಾಡುತಲಿರುವ, ಶುಂಠೀಕಲ್ಕ–ಸುಂಟಿಯ ಕಲ್ಕದಲ್ಲಿ, ಶೃತಂ–ಕಾಯಿಸಲ್ಪಟ್ಟ, ಘೃತಂ–ತುಪ್ಪವು, ಪ್ರಪಿಬತಃ–ತನ್ನನ್ನು ಪಾನಮಾಡುತಲಿರುವ ಪುರುಷನ, ವಾಯೋಃ–ವಾತಕ್ಕೆ, ಅನುಲೋಮನಂ–ಸಾಮ್ಯವನ್ನುಂಟುಮಾಡುತಲಿರುವದು, ಸ್ಯಾತ್–ಆದೀತು. ಗ್ರಹಣಿಕಾ–ಗ್ರಹಣೀರೋಗವು, ವೇಗೇನ–ವೇಗದಿಂದ, ಜಂಗಮ್ಯತೇ–ಅತಿಶಯವಾಗೋಡಿಹೋಗುತಲಿದೆ.

ಪಾಠಾವಿಷಾಕುಟಜವೃಕ್ಷಫಲತ್ವಗಬ್ದತಿಕ್ತಾಮಹಾರಸಜನಾಗರಬಿಲ್ವಚೂರ್ಣಂ ।
ಸಕ್ಷೌದ್ರತಂಡುಲಜಲಂಗ್ರಹಣೀಪ್ರವಾಹರಕ್ತಪ್ರವಾಹಗುದರುಗ್ಗುದಜೇಷು
ದದ್ಯಾತ್ ॥ ೧೦೧ ॥

ಪಾಠಾದಿಚೂರ್ಣ

ಸಕ್ಷೌದ್ರತಂಡುಲಜಲಂ–ಜೇನುತುಪ್ಪ ಕಲಗಚ್ಚುಗಳೊಡನೆ ಕೂಡಿದ, ಪಾಠಾ–ಅಗಳುಸುಂಟೆ, ವಿಷಾ–ಅತಿಬಜೆ, ಕುಟಜವೃಕ್ಷಫಲತ್ವಕ್–ಕೊಡಸಿಗೆಬೀಜ, ಕೊಡಸಿಗೆಪಟ್ಟೆಗಳು, ಅಬ್ದ–ಕೊನ್ನಾರೆಗೆಡ್ಡೆ, ತಿಕ್ತಾ–ಕಟುಕರೋಹಿಣಿ, ಮಹತ್– ಧಾತಕೀಕುಸುಮ, ರಸಜ–ರಸಾಂಜನ, ನಾಗರ–ಸುಂಟಿ, ಬಿಲ್ವ–ಬೆಲ್ಲಪತ್ರ, ಇವುಗಳ, ಚೂರ್ಣಂ–ಪುಡಿಯನ್ನು, ಗ್ರಹಣೀಪ್ರವಾಹ–ಗ್ರಹಣೀರೋಗದ ಅತಿವೃತ್ತಿ, ರಕ್ತಪ್ರವಾಹ–ರಕ್ತಾತಿಸಾರ, ಗುದರುಕ್–ಗುದದನೋವು, ಗುದಜೇಷು–ಮೂಲವ್ಯಾಧಿ, ಇವುಗಳಲ್ಲಿ, ದದ್ಯಾತ್–ಕೊಡಬೇಕು.

ತುಲ್ಯಾಂಶಂ ಸಕಲಂ ಕಿರಾತಕಟುಕಾಮುಸ್ತೇಂದ್ರಜತ್ರ್ಯೂಷಣಂ
ಭಾಗಾಶ್ಚಂದ್ರಕಳಾಮಿತಾಃಕುಟಜತೋಭಾಗದ್ವಯಂಚಿತ್ರಕಾತ್ ।
ಚೂರ್ಣಂ ರತ್ನಕಳಾಭಿದಂ ಗುಡಪಯೋಯುಕ್ತಂಚ ಪಾಂಡುಜ್ವರಾ
ತೀಸಾರಾರುಚಿಕಾಮಿಲಾಗ್ರಹಣಿಕಾಗುಲ್ಮಪ್ರಮೇಹಾಪಹಂ ॥ ೧೦೨ ॥

ರತ್ನಕಳಾಚೂರ್ಣ

ಕಿರಾತಕಟುಕಾಮುಸ್ತೇಂದ್ರಜತ್ರ್ಯೂಷಣಂ : ಕಿರಾತಕಟುಕಾ–ನೆಲಬೇವು, ಮುಸ್ತಾ–ಕೊನ್ನಾರೆಗೆಡ್ಡೆ, ಇಂದ್ರಜ–ಕೊಡಸಿಗೆಬೀಜ, ತ್ರ್ಯೂಷಣಂ–ಸುಂಟಿ, ಹಿಪ್ಪಲಿ, ಮೆಣಸುಗಳು ಇವು, ತುಲ್ಯಾಂಶಂ–ಸಮಭಾಗವುಳ್ಳವು, ಅಂದರೆ,

ದಿನಸೊಂದಕ್ಕೊಂದೊಂದು ಭಾಗವೆಂದಭಿಪ್ರಾಯವು. ಕುಟಜತಃ-ಕೊಡಸಿಗೆಬೀಜದ್ದೆಸೆಯಿಂದ, ಚಂದ್ರಕಳಾಮಿತಾಃ-ಹದಿನಾರು, ಭಾಗಾಃ-ಭಾಗಗಳು, ಚಿತ್ರಕಾತ್ – ಚಿತ್ರಮೂಲದ್ದೆಸೆಯಿಂದ, ಭಾಗದ್ವಯಂ-ಎರಡುಭಾಗಗಳು, ರತ್ನಕಳಾಭಿದಂ-ರತ್ನಕಳಾಯೆಂಬ ಹೆಸರುಳ್ಳ, ಗುಡಪಯೋಯುಕ್ತಂ-ಬೆಲ್ಲ ಹಾಲುಗಳೊಡನೆ ಕೂಡಿದ, ಸಕಲಂ-ಸಮಸ್ತವಾದ, ಚೂರ್ಣಂ-ಹಿಂದೆ ಹೇಳಿದ ಪದಾರ್ಥಗಳ ಚೂರ್ಣವು, ಪಾಂಡು-ಪಾಂಡುರೋಗ, ಜ್ವರ-ಜ್ವರವು, ಅತೀಸಾರ-ಅತಿಸಾರಜಾಡ್ಯವು, ಅರುಚಿ-ಅರೋಚಕಜಾಡ್ಯವು, ಕಾಮಿಲಾ-ಕಾವಾಲೆ, ಗ್ರಹಣಿಕಾ-ಗ್ರಹಣೀಜಾಡ್ಯವು, ಗುಲ್ಮ-ಗೆಡ್ಡೆ, ಪ್ರಮೇಹ- ಪ್ರಮೇಹಜಾಡ್ಯವು, ಇವುಗಳನ್ನು, ಅಪಹಂ-ನಾಶಮಾಡುತ್ತಲಿರುವುದು.

ಅಜಾಜಿಕಾಹಿಂಗುಪಟುತ್ರಯಾಣಾಂ ಕ್ಷಾರದ್ವಯಗ್ರಂಥಿಕಟುತ್ರಯಾಣಾಂ ।
ಚವ್ಯಾಜಮೋದಾಮಿಸಿಚಿತ್ರಕಾಣಾಂ ಚೂರ್ಣಂಸಮಾಂಶಂವಿದಧೀತ
ಧೀಮಾನ್ ॥೧೦೩॥

ಕೋಷ್ಣಾಂಬುನಾಕೋಲರಸೇನಯುಕ್ತಂತಕ್ರಾನ್ವಿತಂಕಾಂಜಿಕಮಿಶ್ರಿತಂವಾ ।
ಪೇಪೀಯಮಾನಂಸುಖದಂನೃಣಾಂ ಸ್ಯಾದ್ಗುಲ್ಮಗ್ರಹಣ್ಯಾಮಗುದಾಂ
ಕುರೇಷು ॥ ೧೦೪ ॥

ಅಜಾಜಿಕಾದಿ ಚೂರ್ಣವು

ಅಜಾಜಿಕಾ-ಜೀರಿಗೆ, ಹಿಂಗು-ಇಂಗು, ಪಟುತ್ರಯಾಣಾಂ-ಸೈಂಧವಲವಣ, ಸೌವರ್ಚಲಲವಣ, ಬಿಡಲವಣ ಇವುಗಳ, ಕ್ಷಾರದ್ವಯ-ಸದ್ಯಕ್ಷಾರ, ಯವಕ್ಷಾರಗಳು, ಗ್ರಂಥಿ-ಮೋಡಿ, ಕಟುತ್ರಯಾಣಾಂ-ಸುಂಟಿ, ಹಿಪ್ಪಲಿ, ಮೆಣಸು ಇವುಗಳ, ಚವ್ಯ – ಚವ್ಯವು, ಅಜಮೋದ – ಓಮು, ಮಿಸಿ-ಸಬ್ಬಸಿಗೆ ಬೀಜ, ಚಿತ್ರಕಾಣಾಂ-ಚಿತ್ರಮೂಲ ಇವುಗಳ, ಚೂರ್ಣಂ-ಪುಡಿಯನ್ನು, ಧೀಮಾನ್-ಬುದ್ಧಿಶಾಲಿಯು, ಸಮಾಂಶಂ-ಸಮತೂಕವಾಗಿ, ವಿದಧೀತ-ಮಾಡಬೇಕು. ಕೋಷ್ಣಾಂಬುನಾ-ಬಿಸಿನೀರಿನೊಡನೆ, ಯುಕ್ತಂ-ಕೂಡಿಯೇ ಆಗಲಿ, ಕೋಲರಸೇನ-ಎಲಚೀಚಿಗುರಿನರಸದೊಡನೆ, ಯುಕ್ತಂ-ಕೂಡಿಯೇ ಆಗಲಿ, ತಕ್ರಾನ್ವಿತಂ-ಮಜ್ಜಿಗೆಯೊಡನೆ ಕೂಡಿಯೇ ಆಗಲಿ,

ಕಾಂಜಿಕಮಿಶ್ರಿತಂವಾ—ಕಲಗಚ್ಚಿನೊಡನೆ ಕೂಡಿಯೇ ಆಗಲಿ, ಪೇಪೀಯ ಮಾನಂ-ಅತಿಶಯದಿಂದ ಪಾನಮಾಡಲ್ಪಡುತಲಿರುವ, ತತ್-ಆ ಚೂರ್ಣವು, ಗುಲ್ಮಗ್ರಹಣ್ಯಾಮಗುದಾಂಕುರೇಷು : ಗುಲ್ಮ-ಗೆಡ್ಡೆ, ಗ್ರಹಣೀ—ಗ್ರಹಣೀ ರೋಗವು, ಆಮ—ಅಜೀರ್ಣರೋಗ, ಗುದಾಂಕುರೇಷು—ಮೂಲವ್ಯಾಧಿ, ಇವು ಗಳಲ್ಲಿ, ನೃಣಾಂ—ಮನುಷ್ಯರಿಗೆ, ಸುಖದಂ—ಸುಖವನ್ನುಂಟುಮಾಡುತಲಿರು ವುದು, ಸ್ಯಾತ್—ಆದೀತು.

ಕ್ಷಾರದ್ವಂದ್ವಪಟುತ್ರಿಕತ್ರಿಕಟುಕೈಶ್ಚವ್ಯಾಜಮೋದಾನಲೈಃ
ಕೃಷ್ಣಾಜೀರಕಹಿಂಗುಮೂಲಮಿಸಿಭಿಸ್ತುಲ್ಯೈರ್ವಿಧೇಯಂರಜಃ ।
ಪೀತಂಕೋಷ್ಣಜಲೇನಕೋಲಪಯಸಾತಕ್ರೇಣವಾನ್ಯೌಷಧಾ
ದಕ್ಷುದ್ಗುಲ್ಮಗುದಾಂಕುರಗ್ರಹಣಿಷುಪ್ರಾಯಃ ಪ್ರಿಯಂಪ್ರೇಯಸಿ ॥೧೦೫॥

ಕ್ಷಾರ ಚೂರ್ಣವು

ತುಲ್ಯೈಃ—ಸಮತೂಕಗಳಾದ, ಕ್ಷಾರದ್ವಂದ್ವ—ಸದ್ಯಕ್ಷಾರ, ಯವಕ್ಷಾರ ಗಳು, ಪಟುತ್ರಿಕ—ಸೈಂಧವಲವಣ ಸೌವರ್ಚಲಲವಣ, ಬಿಡಲವಣಗಳು, ತ್ರಿಕಟುಕೈಃ-ಸುಂಟಿ, ಹಿಪ್ಪಲಿ, ಮೆಣ ಸುಗಳು ಇವುಗಳಿಂದ, ಚವ್ಯ—ಚವ್ಯವು, ಅಜಮೋದಾ—ಓಮು, ಅನಲೈಃ—ಚಿತ್ರಮೂಲ ಇವುಗಳಿಂದ, ಕೃಷ್ಣಾ—ಹಿಪ್ಪಲಿ, ಜೀರಕ—ಜೀರಿಗೆ, ಹಿಂಗು—ಹುರಿದಿಂಗಿನಪುಡಿ, (ಚೂರ್ಣೇಷುಭರ್ಜಿತಂಹಿಂಗು) ಎಂಬ ವಾಗಿರುವುದರಿಂದ ಚೂರ್ಣಗಳಲ್ಲಿ ಇಂಗನ್ನು ಹುರಿದೇಹಾಕಬೇಕೆಂದಭಿ ಪ್ರಾಯವು. ಮೂಲ—ಮೋಡಿ, ಮಿಸಿಭಿಃ—ಸಬ್ಬಸಿಗೆಬೀಜ, ಇವುಗಳಿಂದ, ರಜಃ—ಚೂರ್ಣವು, ವಿಧೇಯಂ—ಮಾಡತಕ್ಕದ್ದು. ಹೇಪ್ರೇಯಸಿ—ಎಲೇ ಪ್ರಾಣ ಕಾಂತೆಯೇ! ಕೋಷ್ಣಜಲೇನ—ಬಿಸಿನೀರಿನೊಡನೆಯಾಗಲಿ, ಕೋಲಪಯ ಸಾ—ಎಲಚೀಚಿಗುರಿನ ರಸದೊಡನೆಯಾಗಲಿ, ತಕ್ರೇಣವಾ-ಮಜ್ಜಿಗೆಯೊಡನೆ ಯಾಗಲಿ, ಪೀತಂ—ಪಾನಮಾಡಲ್ಪಟ್ಟ, ತತ್—ಆ ಚೂರ್ಣವು, ಅನ್ಯೌಷ ಧಾತ್ – ಇತರೌಷಧಸೇವನೆಯಿಂದುಂಟಾದ, ಅಕ್ಷುತ್ – ಹಸಿವಿಲ್ಲದೆ ಯಿರೋಣ, ಗುಲ್ಮ—ಗೆಡ್ಡೆ, ಗುದಾಂಕುರ—ಮೂಲವ್ಯಾಧಿ, ಗ್ರಹಣಿಷು—ಗ್ರಹಣೀರೋಗ, ಇವುಗಳಲ್ಲಿ, ಪ್ರಾಯಃ—ಬಹುಪ್ರಕಾರವಾಗಿ, ಪ್ರಿಯಂ—ಇಷ್ಟವಾದದ್ದು.

ದ್ವಿಕ್ಷಾರಷಟ್ಕಟುಪಟುವ್ರಜಹಿಂಗುದೀಪ್ಯೈಃ
ಸ್ಯಾತ್ಸಾರಲುಂಗಬದರೈಕರಸೇನಯುಕ್ತಃ ।
ಶ್ಲೇಷ್ಮಾನಿಲಗ್ರಹಣಿಕಾಸು ಗುಳಃಪ್ರಶಸ್ತೋ
ನಕ್ಷತ್ರಮುಖ್ಯಮುಖಿ ದೀಪನಪಾಚನೋಽಯಂ ॥ ೧೦೬ ॥

ದ್ವಿಕ್ಷಾರಾದಿ ಚೂರ್ಣವು

ಹೇನಕ್ಷತ್ರಮುಖ್ಯಮುಖಿ–ಎಲೇ ಚಂದ್ರಮುಖಿಯೇ! ದ್ವಿಕ್ಷಾರ–ಸದ್ಯಕ್ಷಾರ, ಯವಕ್ಷಾರಗಳು, ಷಟ್ಕಟು – ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಸುಂಟಿ, ಮೆಣಸುಗಳು, ಪಟುವ್ರಜ–ಸೈಂಧವಲವಣ, ಸೌವರ್ಚಲಲವಣ, ಬಿಡಲವಣ, ಗಾಜುಲವಣ, ಸಮುದ್ರದಲವಣ, ಅಟ್ಟುಪ್ಪುಗಳು, ಹಿಂಗು–ಇಂಗು, ದೀಪ್ಯೈಃ–ಓಮು, ಇವುಗಳಿಂದ ಮಾಡಲ್ಪಟ್ಟ, ಸಾರ – ದಾಳಿಂಬೆಮೇಣ, ಲುಂಗ – ಮಾದಳದಹಣ್ಣು, ಬದರ–ಎಲಚೀಚಿಗುರು ಇವುಗಳಲ್ಲಿ, ಏಕರಸೇನ–ಒಂದರ ರಸದೊಡನೆ, ಯುಕ್ತಃ–ಕೂಡಿದ, ಗುಳಃ–ಗುಳಿಗೆಯು, ಶ್ಲೇಷ್ಮಾನಿಲಗ್ರಹಣಿಕಾಸು–ಕಫಜಾಡ್ಯ ವಾತವ್ಯಾಧಿ ಗ್ರಹಣೀರೋಗಗಳಲ್ಲಿ, ಪ್ರಶಸ್ತಃ– ಶ್ರೇಷ್ಠವಾದದ್ದು, ಸ್ಯಾತ್– ಆದೀತು, ಅಯಂ–ಈ ಗುಳಿಗೆಯು, ದೀಪನ–ಅಗ್ನಿದೀಪ್ತಿಯನ್ನುಂಟು ಮಾಡುತಲಿರುವದು, ಪಾಚನಃ–ಆಮರಸವನ್ನು ಪಕ್ವಮಾಡುತಲಿರುವದು.

ಚೂರ್ಣಂಚಿತ್ರಕಚವ್ಯಶ್ರೀವಿಶ್ವಭೇಷಜನಿರ್ಮಿತಂ ।
ತಕ್ರೇಣಸಹಿತಂಹಂತಿ ಗ್ರಹಣೀಂ ದುಃಖಕಾರಿಣೀಂ ॥ ೧೦೭ ॥

ಚಿತ್ರಕಾದಿಚೂರ್ಣ

ಚಿತ್ರಕ–ಚಿತ್ರಮೂಲ, ಚವ್ಯ–ಚವ್ಯವು, ಶ್ರೀ–ಬಿಲ್ವಪತ್ರೆ, ವಿಶ್ವಭೇಷಜ–ಸುಂಟಿ ಇವುಗಳಿಂದ, ನಿರ್ಮಿತಂ–ಮಾಡಲ್ಪಟ್ಟ, ತಕ್ರೇಣ–ಮಜ್ಜಿಗೆಯೊಡನೆ, ಸಹಿತಂ–ಕೂಡಿದ, ಚೂರ್ಣಂ–ಚೂರ್ಣವು, ದುಃಖಕಾರಿಣೀಂ–ದುಃಖವನ್ನುಂಟುಮಾಡುತಲಿರುವ, ಗ್ರಹಣೀಂ-ಗ್ರಹಣೀರೋಗವನ್ನು, ಹಂತಿ-ನಾಶಮಾಡುತಲಿದೆ.

ಪಂಚಕಾಗ್ನಿಮರೀಚಾನಾಂ ಚೂರ್ಣಂತಕ್ರೇಣಸೇವಿತಂ ।
ಗ್ರಹಣ್ಯುದರಗುಲ್ಮಾರ್ಶೋ ಮಂದಾಗ್ನಿಪ್ಲೀಹನಾಶನಂ ॥ ೧೦೮ ॥

ತಕ್ರೇಣ—ಮಜ್ಜಿಗೆಯೊಡನೆ, ಸೇವಿತಂ—ಸೇವಿಸಲ್ಪಟ್ಟ, ರುಚಕ—ಸೌವರ್ಚಲಲವಣ, ಅಗ್ನಿ—ಚಿತ್ರಮೂಲ, ಮರೀಚಾನಾಂ—ಮೆಣಸು, ಇವುಗಳ. ಚೂರ್ಣಂ-ಚೂರ್ಣವು, ಗ್ರಹಣೀ-ಗ್ರಹಣೀರೋಗವು, ಉದರ—ಎಂಟು ತೆರಗಳಾದುದರ ಜಾಡ್ಯಗಳು, ಗುಲ್ಮ—ಗೆಡ್ಡೆಗಳು, ಅರ್ಶಃ—ಮೂಲವ್ಯಾಧಿಗಳು, ಮಂದಾಗ್ನಿ-ಅಗ್ನಿಮಾಂದ್ಯವು, ಪ್ಲೀಹ-ಎಡಪಕ್ಕದಲ್ಲಿರುವ ಮಾಂಸ ವಿಶೇಷದ ರೋಗವು, ಇವುಗಳನ್ನು, ನಾಶನಂ—ನಾಶಮಾಡುತಲಿರುವದು.

ರುಚಕಾದಿ ಚೂರ್ಣ

ಆಜಂಪಯೋಜಲಧರೇಂದ್ರಜಬಾಲಬಿಲ್ವ
ಹ್ರೀಬೇರಮೋಚರಸಕಲ್ಕಯುತಂವಿಪಕ್ವಂ ।
ಆಮಾನುಬಂಧಸಹಿತಂರುಧಿರಾನ್ವಿತಂಚ
ಸದ್ಯೋನಿಹಂತಿಗೃಹಿಣಿಗ್ರಹಣೀವಿಕಾರಂ ॥ ೧೦೯ ॥

ಹೇಗೃಹಿಣಿ—ಎಲೇ ಪತ್ನಿಯೇ! ಜಲಧರ—ಕೊನ್ನಾರೆಗೆಡ್ಡೆ, ಇಂದ್ರಜ—ಕೊಡಸಿಗೆಬೀಜ. ಬಾಲಬಿಲ್ವ—ಬಿಲ್ವದಹೀಚು, ಹ್ರೀಬೇರ—ಲಾಮಂಚ, ಮೋಚರಸ—ಎಲವದಹಗಿನು. ಇವುಗಳ,ಕಲ್ಕಯುತಂ: ಕಲ್ಕ—ಕಲ್ಕದೊಡನೆ, ಯುತಂ-ಕೂಡಿದ, ವಿಪಕ್ವಂ—ಕಾಯಿಸಿದ; ಆಜಂಪಯಃ—ಆಡಿನಹಾಲು, ಆಮಾನುಬಂಧಸಹಿತಂ—ಆಮರಸಸಂಬಂಧದೊಡನೆ ಕೂಡಿದ, ರುಧಿರಾನ್ವಿತಂಚ—ರಕ್ತದೊಡನೆ ಕೂಡಿದ. ಗ್ರಹಣೀವಿಕಾರಂ—ಗ್ರಹಣೀರೋಗವನ್ನು, ಸದ್ಯಃ—ತತ್ಕ್ಷಣದಲ್ಲಿ, ನಿಹಂತಿ—ನಾಶಮಾಡುತಲಿದೆ.

ಘನಕ್ಷೀರ

ತಕ್ರೇಣಯಃಪಿಬೇನ್ನಿತ್ಯಂ ಚೂರ್ಣಂಮರೀಚಜಂಯದಿ ।
ಚಿತ್ರಸೌವರ್ಚಲೋಪೇತಂಗ್ರಹಣೀತಸ್ಯನಶ್ಯತಿ ॥ ಎಂಬುದು ಪ್ರಕ್ಷಿಪ್ತಶ್ಲೋಕವು.

---

## ಅಥ ಕಾಸಶ್ವಾಸಚಿಕಿತ್ಸಾ.

ಅತಃಪರಂಕೋಮಲವಾಣಿಕಾಸಶ್ವಾಸಪ್ರತೀಕಾರ ಮುದೀರಯಾಮಃ ।
ನಿಹಂತಿಕಾಸಂಲಘುಪಂಚಮೂಲೀಕೃತಃಕಷಾಯಶ್ಚಪಲಾಸಹಾಯಃ ॥೧೧೦॥

ಹೇ ಕೋಮಲವಾಣಿ–ಎಲೆ ಮನೋಹರಗಳಾದ ಮಾತುಗಳುಳ್ಳ ಸ್ತ್ರೀಯೇ ! ಅತಃಪರಂ–ಈ ಗ್ರಹಣೀ ಚಿಕಿತ್ಸೆಗಿಂತ

ಲಘುಪಂಚ ಮೂಲ ಕಷಾಯ

ಅನಂತರದಲ್ಲಿ, ಕಾಸ–ಕೆಮ್ಮು, ಶ್ವಾಸ–ಉಬ್ಬಸ ಇವುಗಳ, ಪ್ರತೀಕಾರಂ–ಚಿಕಿತ್ಸೆಯನ್ನು, ಉದೀರಯಾಮಃ- ಹೇಳುತಲಿದೇವೆ. ಲಘುಪಂಚಮೂಲೀ–ಹೆಗ್ಗುಳ್ಳ, ನೆಲಗುಳ್ಳ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ನೆಗ್ಗಿಲುಗಳಿಂದ, ಕೃತಃ-ಮಾಡಲ್ಪಟ್ಟ, ಚಪಲಾಸಹಾಯಃ–ಹಿಪ್ಪಲೀ ಚೂರ್ಣದೊಡನೆ ಕೂಡಿದ, ಕಷಾಯಃ–ಕಷಾಯವು, ಕಾಸಂ–ಕೆಮ್ಮು ಜಾಡ್ಯವನ್ನು, ನಿಹಂತಿ–ನಾಶ ಮಾಡುತಲಿದೆ.

ಘನವಿಶ್ವಶಿವಾಗುಡಜಾಘುಟಿಕಾ ತ್ರಿದಿನಂವದನಾಂಬುಜಮಧ್ಯಧೃತಾ ।
ಹರತಿಶ್ವಸನಂಕಸನಂಲಲನೆ ಲಲನೇವಹಿಮಂ ಹೃದಯೋಪಗತಾ ॥೧೧೧॥

ಹೇಲಲನೆ–ಎಲೇ ಸ್ತ್ರೀಯೇ, ಹೃದಯೋಪಗತಾ–ಎದೆಯನ್ನು ಹೊಂದಿದ, ಲಲನಾ–ಸ್ತ್ರೀಯು, ಹಿಮಮಿವ–ಛಳಿಯನ್ನೋ

ಘನಾದಿವಟಿ

ಪಾದಿಯಲ್ಲಿ, ಘನವಿಶ್ವಶಿವಾಗುಡಜಾ–ಕೊನ್ನಾರೆಗೆಡ್ಡೆ, ಸುಂಟಿ, ಅಳಲೇಕಾಯಿ, ಬೆಲ್ಲಗಳಿಂದುಂಟಾದ, ತ್ರಿದಿನಂ-ಮೂರುದಿವಸಗಳಲ್ಲಿ, ವದನಾಂಬುಜಮಧ್ಯಧೃತಾ–ಬಾಯಲ್ಲಿ ಧರಿಸಲ್ಪಟ್ಟ. ಘುಟಿಕಾ–ಗುಳಿಗೆಯು, ಶ್ವಸನಂ–ಉಬ್ಬಸವನ್ನು, ಕಸನಂ– ಕೆಮ್ಮನ್ನು, ಹರತಿ–ನಾಶಮಾಡುತಲಿದೆ.

ಅಜಸ್ಯಮೂತ್ರಸ್ಯಶತಂಪಲಾನಾಂ ಶತಂಫಲಾನಾಂಚ ವಿಭೀತಕಸ್ಯ ।
ಪಕ್ವಂಸಮಧ್ವಾಶುನಿಹಂತಿಕಾಸಂ ಶ್ವಾಸಂಚತದ್ವತ್ಸಬಲಂಬಲಾಸಂ ॥೧೧೨॥

ಪಕ್ವಂ–ಬೇಯಿಸಿದ, ವಿಭೀತಕಸ್ಯ-ತಾರೆಯ, ಫಲಾನಾಂ–ಕಾಯಿಗಳ, ಶತಂ–ನೂರು, ಅಜಸ್ಯಮೂತ್ರಸ್ಯ–ಆಡಿನಮೂತ್ರದ,

ವಿಭೀತಕ ಪ್ರಯೋಗ

ಪಲಾನಾಂ–ಪಲಗಳ, ಶತಂ–ನೂರು, ಸಮಧುಸತ್–ಜೇನುತುಪ್ಪದೊಡನೆ ಸೇರಿದ್ದಾಗಿ, ಕಾಸಂ–ಕೆಮ್ಮನ್ನು, ಶ್ವಾಸಂಚ–ಉಬ್ಬಸವನ್ನು, ತದ್ವತ್–ಅವುಗಳಂತೆ,

ಸಬಲಂ–ಬಲಿಷ್ಠವಾದ, ಬಲಾಸಂ–ಶ್ಲೇಷ್ಮವನ್ನು, ಆಶು–ಶೀಘ್ರವಾಗಿ, ನಿಹಂತಿ–ನಾಶಮಾಡುತಲಿದೆ.

ತಾತ್ಪರ್ಯ.—ಮುನ್ನೂರು ರೂಪಾಯಿಗಳತೂಕ ಆಡಿನ ಮೂತ್ರದಲ್ಲಿ, ಮುನ್ನೂರು ತಾರೇಕಾಯಿಗಳನ್ನು ಹಾಕಿ, ಜಲಾಂಶವಿಲ್ಲದಹಾಗೆ ಬೇಯಿಸಿ, ತಕ್ಕಷ್ಟು ಜೇನುತುಪ್ಪದಲ್ಲಿ ಹಾಕಿ ಇರಿಸಿಕೊಂಡು ಪ್ರತಿದಿವಸದಲ್ಲೂ ದೇಹ ಬಲ ರೋಗಬಲಾನುಸಾರವಾಗಿ, ಆ ಕಾಯಿಗಳಂ ಸೇವಿಸಲು ಉಬ್ಬಸ ಮೊದಲಾದ ಶ್ಲೇಷ್ಮ ಜಾಡ್ಯವು ನಾಶವಾದೀತು.

ಆರ್ದ್ರಾದರ್ಧತುಲಾ ಗುಡಾದಪಿ ತಥಾರ್ಧಾರ್ಧಮ್ಪ್ರಂಚ ಕುಸ್ತುಂಬರೀ
ದೀಪ್ಯಾಯೋಜರಣತ್ರಿಜಾತಜಲದಾದೇತತ್ಪಚೇದ್ಯುಕ್ತಿತಃ ।
ಲೇಹೋರತ್ನಕಳೀತವೈವಕಥಿತಃ ಪ್ರಾಣಪ್ರಿಯಾಯಾ ಮಯಾ
ಕಾಸಾರ್ಶೋಜ್ವರಪೀನಸಶ್ವಯಥುರುಗ್ಗುಲ್ಮಕ್ಷಯಧ್ವಂಸನಃ ॥೧೧೩॥

ಆರ್ದ್ರಕಾದಿ ಲೇಹವು

ಆರ್ದ್ರಾತ್–ಹಸೀಸುಂಟೀದೆಸೆಯಿಂದ, ಅರ್ಧತುಲಾ–ನೂರೈವತ್ತು ರೂಪಾಯಿಗಳತೂಕ, ಗುಡಾದಪಿ–ಬೆಲ್ಲದ್ದೆಸೆಯಿಂದಲೂ ಕೂಡ, ತಥಾ–ನೂರೈವತ್ತು ರೂಪಾಯಿಗಳತೂಕ, ಕುಸ್ತುಂಬರೀ–ಕೊತ್ತುಂಬರೀಬೀಜ, ದೀಪ್ಯ–ಓಮ, ಅಯಃ–ಅರಪುಡಿ, ಜರಣ–ಜೀರಿಗೆ, ತ್ರಿಜಾತ–ಲವಂಗ ಚಕ್ಕೆ, ಲವಂಗಪತ್ರೆ, ಯಾಲಕ್ಕಿಗಳು, ಜಲದಾತ್ ಕೊನ್ನಾರಿಗೆಡ್ಡೆ ಇವು ಗಳದೆಸೆಯಿಂದ, ಅರ್ಧಾರ್ಧಮ್ಪ್ರಂಚ–ಪ್ರತ್ಯೇಕವಾಗೊಂದೂವರೆ ರೂಪಾಯಿನ ತೂಕ, ಏತತ್–ಇವುಗಳನ್ನೆಲ್ಲವಂ, ಯುಕ್ತಿತಃ–ಯುಕ್ತಿಯ ದೆಸೆಯಿಂದ, ಪಚೇತ್–ಪಾಕವಂ ಮಾಡಬೇಕು. ಅಂದರೆ, ನೂರೈವತ್ತುರೂಪಾಯಿ ಗಳತೂಕ ಹಸೀಸುಂಟೀರಸದಲ್ಲಿ, ನೂರೈವತ್ತುರೂಪಾಯಿಗಳತೂಕ ಬೆಲ್ಲ ವಂ ಹಾಕಿ, ಸಂಪ್ರದಾಯಾನುಸಾರವಾಗಿ ಪಾಕವಂ ಮಾಡಿ, ಆ ಪಾಕದಲ್ಲಿ ಪ್ರತ್ಯೇಕವಾಗೊಂದೂವರೆ ರೂಪಾಯಿನತೂಕ ಕೊತ್ತುಂಬರೀಬೀಜ ಮೊದ ಲಾದವುಗಳ ಪುಡಿಗಳಂ ಹಾಕಿ ತೊಳಸಿ ಹದದಿಂದ ಲೇಹವಂ ಮಾಡಬೇ ಕೆಂದಭಿಪ್ರಾಯವು.

ಹೇ ರತ್ನಕಳೀ—ಎಲೇರತ್ನಕಳಿಯೇ! ಕಾಸ—ಕೆಮ್ಮು, ಅರ್ಶಃ—ಮೂಲ ವ್ಯಾಧಿ, ಜ್ವರ—ಜ್ವರವು, ಪೀನಸ—ಪೀನಸರೋಗ, ಶ್ವಯಥುರುಕ್—ಶೋಫ ಜಾಡ್ಯ, ಗುಲ್ಮ—ಗೆಡ್ಡೆ, ಕ್ಷಯ—ಕ್ಷಯರೋಗವು, ಇವುಗಳನ್ನು, ಧ್ವಂಸನಃ—ನಾಶಮಾಡುತಲಿರುವ, ಲೇಹಃ—ಈ ಲೇಹವು, ಮಯಾ—ನನ್ನಿಂದ, ಪ್ರಾಣಪ್ರಿಯಾಯಾಃ—ಪ್ರಾಣಕಾಂತೆಯಾದ, ತವೈವ—ನಿನಗೆಯೇ, ಕಥಿತಃ—ಹೇಳಲ್ಪಟ್ಟಿತು.

ರಾಸ್ನಾಬಲಾಪದ್ಮಕದೇವದಾರು ಫಲತ್ರಿಕತ್ರ್ಯೂಷಣವೆಲ್ಲಚೂರ್ಣಃ |
ಚಿಂತಾಮಣಿಃಕ್ಷೌದ್ರಘೃತೋಪಪನ್ನಃ ಶ್ವಾಸಾಂಶ್ಚಕಾಸಾಂಶ್ಚನಿರಾಕರೋತಿ ||೧೧೪||

ಕ್ಷೌದ್ರಘೃತೋಪಪನ್ನಃ—ಜೇನುತುಪ್ಪ ತುಪ್ಪಗಳೊಡನೆ ಕೂಡಿದ, ಚಿಂತಾಮಣಿಃ-ಚಿಂತಾಮಣಿಯೆಂಬ ಹೆಸರುಳ್ಳ, ರಾಸ್ನಾ-ರಾಸ್ಮೆ, ಬಲಾ—ಕಳ್ಳಂಗಡಲೆ, ಪದ್ಮಕ—ಪದ್ಮಕವು, ದೇವದಾರು—ತುಪ್ಪದೇವದಾರು, ಫಲತ್ರಿಕ—ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟುಗಳು, ತ್ರ್ಯೂಷಣ—ಸುಂಟಿ, ಹಿಪ್ಪಲಿ, ಮೆಣಸುಗಳು, ವೆಲ್ಲ—ವಾಯುವಿಳಂಗ, ಇವುಗಳ, ಚೂರ್ಣಃ—ಚೂರ್ಣವು, ಶ್ವಾಸಾಂಶ್ಚ—ಕೆಮ್ಮುಜಾಡ್ಯಗಳನ್ನು, ಕಾಸಾಂಶ್ಚ—ಉಬ್ಬಸರೋಗಗಳನ್ನು, ನಿರಾಕರೋತಿ—ನಾಶಮಾಡುತಲಿದೆ.

ಚಿಂತಾಮಣಿ ಚೂರ್ಣವು

ತುಪ್ಪ ಜೇನುತುಪ್ಪಗಳನ್ನು ಸಮವಾಗಿ ಸೇರಿಸಬಾರದು.

ಭಜೇತೇ ವಿಷರೂಪತ್ವಂ ತುಲ್ಯಾಂಶೇ ಮಧುಸರ್ಪಿಷೀ |

ಎಂದು ವಾಗ್ಭಟಾಚಾರ್ಯರು ಹೇಳಿರುವರು.

ವಾಶಾಪಂದ್ರಾಧನಿಕಾಗುಳೂಚೀ ಭಾರ್ಙ್ಗೀಕಣಾನಾಗರರಿಂಗಿಣೀನಾಂ |
ಕ್ವಾಥೇನಮಾರೀಚರಜೋನ್ವಿತೇನಶ್ವಾಸಾಃಕ್ಷಯಂಯಾಂತಿ ನಕಸ್ಯಪುಂಸಃ ||೧೧೫||

ಮಾರೀಚರಜೋನ್ವಿತೇನ—ಮೆಣಸಿನಪುಡಿಯೊಡನೆ ಕೂಡಿದ, ವಾಶಾ-ಆಡುಸೋಗೆ, ಹರಿದ್ರಾ—ಅರಿಸಿನ, ಧನಿಕಾ—ಕೊತ್ತುಂಬರೀಬೀಜ, ಗುಳೂಚೀ—ಅಮೃತವಳ್ಳಿ, ಭಾರ್ಙ್ಗೀ—ಗಂಟುಭಾರಂಗಿ, ಕಣಾ—ಹಿಪ್ಪಲಿ, ನಾಗರ—ಸುಂಟಿ, ರಿಂಗಿಣೀ

ಆಡುಸೋಗ ಕಷಾಯವು

ನಾಂ—ಹೆಗ್ಗುಳ್ಳಿ, ಇವುಗಳ, ಕ್ವಾಥೇನ—ಕಷಾಯದಿಂದ, ಕಸ್ಯಪುಂಸಃ—ಯಾವ ಪುರುಷನ, ಶ್ವಾಸಾಃ—ಉಬ್ಬಸರೋಗಗಳು, ಕ್ಷಯಂ—ನಾಶವನ್ನು, ನಯಾಂತಿ-ಹೊಂದುವುದಿಲ್ಲ. ಎಲ್ಲರ ಉಬ್ಬಸಗಳೂ ನಾಶವನ್ನು ಹೊಂದುವವೆಂದಭಿಪ್ರಾಯವು.

ತುಲ್ಯಾಲವಂಗಮರಿಚಾಕ್ಷಫಲತ್ವಚಃಸ್ಯುಃ
ಸರ್ವೈಸ್ಸಮೋನಿಗದಿತಃಖದಿರಸ್ಯಸಾರಃ।
ಬಬ್ಬೂರವೃಕ್ಷಜಕಷಾಯಜುಷಾಂಚತುರ್ಣಾಂ
ಕಾಸಾನ್ನಿಹಂತಿ ಘುಟಿಕಾ ಘುಟಿಕಾಷ್ಟಕಾಂತೇ ॥೧೧೬॥

ಲವಂಗಾದಿವಟಿ

ಲವಂಗಮರಿಚಾಕ್ಷಫಲತ್ವಚಃ : ಲವಂಗ—ಲವಂಗವು, ಮರಿಚ—ಮೆಣಸು, ಅಕ್ಷಫಲತ್ವಚಃ—ತಾರೆಕಾಯಿಗಳಸಿಪ್ಪೆ ಇವು, ತುಲ್ಯಾಃ—ಸಮತೂಕಗಳು, ಸ್ಯುಃ-ಆಗುವವು, ಖದಿರಸ್ಯ-ಖದಿರವೃಕ್ಷದ, ಸಾರಃ—ಮೇಣ, (ಅಂದರೆ) ಕಾಚು, ಸರ್ವೈಃ—ಹಿಂದೆಹೇಳಿದ ಮೂರುಪದಾರ್ಥಗಳೊಡನೆ, ಸಮಃ—ಸಮತೂಕವೆಂದು, ನಿಗದಿತಃ—ಹೇಳಲ್ಪಟ್ಟಿತು, ಬಬ್ಬೂರವೃಕ್ಷಜಕಷಾಯಜುಷಾಂ—ಗೊಬ್ಬಳೀಚಕ್ಕೆಕಷಾಯವಂಹೊಂದುತಲಿರುವ, ಚತುರ್ಣಾಂ—ಹಿಂದೆ ಹೇಳಿದನಾಲ್ಕು ಪದಾರ್ಥಗಳ, ಘುಟಿಕಾ—ಗುಳಿಗೆಯು, ಘುಟಿಕಾಷ್ಟಕ—ಎಂಟು ಘುಳಿಗೆಗಳ, ಅಂತೇ—ಕೊನೆಯಲ್ಲಿ, (ಅಂದರೆ) ಒಂಭತ್ತನೇಘುಳಿಗೆಯಲ್ಲಿ, ಕಾಸಾರ್ನ—ಕೆಮ್ಮುಲುಗಳನ್ನು, ನಿಹಂತಿ—ನಾಶಮಾಡುತಲಿದೆ.

ವಾತಂನಿರ್ದಳಯನ್ಕಫಂಕಬಳಯನ್ನುನ್ಮೂಲಯನ್ಪೀನಸಂ
ದೃಷ್ಟಿಂನಿರ್ಮಲಯನ್ಪ್ರಭಾಂಪ್ರಬಲಯರ್ನ್ಹೃದ್ರೋಗಮುತ್ಸಾರಯರ್ನ।
ನಿಶ್ಶೇಷಂಜಠರಾಮಯಂಪ್ರಶಮಯನ್ನುದ್ದೀಪಯನ್ಪಾವಕಂ
ಕಾಸಶ್ವಾಸನಿರಾಸಸಾಧನಮಸೌ ವಿಶ್ವಾಕಷಾಯಃಸ್ಮೃತಃ ॥೧೧೭॥

ಶುಂಠೀ ಕಷಾಯವು

ವಾತಂ—ವಾಯು ರೋಗವನ್ನು, ನಿರ್ದಳಯರ್ನ—ಸೀಳುತಲಿರುವ, ಕಫಂ — ಶ್ಲೇಷ್ಮರೋಗವನ್ನು, ಕಬಳಯರ್ನ—ತಿನ್ನುತಲಿರುವ, ಪೀನಸಂ—ಪೀನಸವನ್ನು, ಉನ್ಮೂಲಯರ್ನ—ಕೀಳುತಲಿರುವ, ದೃಷ್ಟಿಂ—ಕಣ್ಣನ್ನು, ನಿರ್ಮಲಯರ್ನ—ಸ್ವಚ್ಛ

ವನ್ನಾಗಿ ಮಾಡುತಲಿರುವ, ಪ್ರಭಾಂ—ಕಾಂತಿಯನ್ನು, ಪ್ರಬಲಯ೯—ಹೆಚ್ಚಿಸುತಲಿರುವ, ಹೃದ್ರೋಗಂ—ಹೃದಯಶೂಲೆ ಮೊದಲಾದವನ್ನು, ಉತ್ಸಾರಯ೯—ಹೊರಡಿಸುತಲಿರುವ, ಜಠರಾಮಯಂ—ಹೊಟ್ಟೆಯಲ್ಲುಂಟಾಗುವ ಅತಿಸಾರ ಮೊದಲಾದ ಜಾಡ್ಯವನ್ನು, ನಿಶ್ಶೇಷಂ—ಶೇಷವಿಲ್ಲದಹಾಗೆ, ಪ್ರಶಮಯ೯—ಶಮನಮಾಡುತಲಿರುವ, ಪಾವಕಂ—ಜಠರಾಗ್ನಿಯನ್ನು, ಉದ್ದೀಪಯ೯—ಪ್ರಬಲವನ್ನಾಗಿ ಮಾಡುತಲಿರುವ, ಅಸೌ—ಈ, ವಿಶ್ವಾಕಷಾಯಃ—ಸುಂಟೀಕಷಾಯವು, ಕಾಸಶ್ವಾಸನಿರಾಸಸಾಧನಂ—ಕೆಮ್ಮು ಉಬ್ಬಸಗಳಂ ನಾಶಮಾಡತಕ್ಕದ್ದಕ್ಕೆ ಸಾಮಗ್ರಿಯೆಂದು, ಸ್ಮೃತಃ—ಹೇಳಲ್ಪಟ್ಟಿತು.

ರೂಪಂಕೀದೃಕ್ಕಮಲವದನೆ ನುಃಪರೇಸೌ ಗಿರೇಃಸ್ಯಾ
ತ್ಸಂಬುದ್ಧಿಃಕಾ ಮಧುರವಚನೇಕಿಂಹುತಾಶಸ್ಯಬೀಜಂ ।
ಕಸ್ಯಕ್ವಾಥಃಶ್ವಸನಶಮನೋವಲ್ಲಭೇನೇತಿಪೃಷ್ಟಾ
ವಿದ್ವದ್ವಂದ್ಯಾದ್ರುತತರಮುದಾತ್ಸೋತ್ತರಂನಾಗರಸ್ಯ ॥೧೧೮॥

ಹೇಕಮಲವದನೆ—ಎಲೇ ತಾವರೆಹುವ್ವಿನಂತಿರುವ ಮುಖವುಳ್ಳ ಸ್ತ್ರೀಯೇ! ಸೌ—ಸುಪ್ರತ್ಯಯವು, ಪರೇಸತಿ—ಪರವಲ್ಲಿರುತಿರಲಾಗಿ, ನುಃ—ನೃಶಬ್ದದ, ರೂಪಂ—ಆಕಾರವು, ಕೀದೃಕ್—ಎಂಥಾದ್ದು, ಸ್ಯಾತ್—ಆದೀತು. ಹೇಮಧುರವಚನೆ—ಎಲೇ ಶ್ರಾವ್ಯಗಳಾದ ಮಾತುಗಳುಳ್ಳಸ್ತ್ರೀಯೇ! ಗಿರೇಃ—ಪರ್ವತವಾಚಿಯಾದ ಅಗಶಬ್ದದ, ಸಂಬುದ್ಧಿಃ—ಸಂಬೋಧನಪ್ರಥಮೈಕವಚನವು, ಕಾ—ಯಾವುದು. ಹುತಾಶಸ್ಯ—ಅಗ್ನಿಯ, ಬೀಜಂ—ಬೀಜಾಕ್ಷರವು, ಕಿಂ—ಯಾವುದು, ಕಸ್ಯ—ಯಾವಪದಾರ್ಥದ, ಕ್ವಾಥಃ—ಕಷಾಯವು, ಶ್ವಸನಶಮನಃ—ಉಬ್ಬಸವನ್ನಾಶಮಾಡುತಲಿದೆ. ಇತಿ—ಈನಾಲ್ಕು ಪ್ರಕಾರವಾಗಿ, ವಲ್ಲಭೇನ—ನಾಯಕನಿಂದ, ಪೃಷ್ಟಾ—ಪ್ರಶ್ನೆಮಾಡಲ್ಪಟ್ಟ, ವಿದ್ವದ್ವಂದ್ಯಾ—ಬುದ್ಧಿಶಾಲಿಗಳಿಂದ ಸ್ತುತಿಮಾಡಲು ಯೋಗ್ಯಳಾದ, ಸಾ—ಆ ರತ್ನಕಳಾನಾಮಕಸ್ತ್ರೀಯು, ದ್ರುತತರಂ—ಶೀಘ್ರವಾಗಿ, ನಾಗರಸ್ಯ—ನಾಗರಸ್ಯ, ಎಂಬ, ಉತ್ತರಂ—ಪ್ರತ್ಯುತ್ತರವನ್ನು, ಅದಾತ್—ಕೊಟ್ಟಳು.

ತಾತ್ಪರ್ಯ.—ಮೊದಲನೆಯಪ್ರಶ್ನೆಗೆ ನಾ ಎಂಬುದಾಗಿಯು, ಎರಡನೆಯ ಪ್ರಶ್ನೆಗೆ ಅಗ ಎಂಬುದಾಗಿಯು, ಮೂರನೆಯ ಪ್ರಶ್ನೆಗೆ ರಂ ಎಂಬು

ದಾಗಿಯು, ನಾಲ್ಕನೆಯ ಪ್ರಶ್ನೆಗೆ ನಾಗರಸ್ಯ–ಎಂಬುದಾಗಿಯು, ಪ್ರತ್ಯುತ್ತರ ವಂ ಕೊಟ್ಟಳೆಂದಭಿಪ್ರಾಯವು.

ಮಧುರವಚನೇಕಾಗ್ನಿಬೀಜಸ್ಯಷಷ್ಠೀಯೆಂದು ಪಾಠಾಂತರವು. ಅದು ಸಮಾಚೀನವಾದದ್ದು. ಸುಂಟೀಕಷಾಯ ಉಬ್ಬಸವನ್ನಾಶಮಾಡುವದೆಂದು ಮುಖ್ಯ ತಾತ್ಪರ್ಯ.

ಕಟುತೈಲೇನಸಂಯುಕ್ತೋ ಗುಡೋಯಾವನ್ನಸೇವಿತಃ ।
ತಾವನ್ನಶ್ಯತಿಕಿಂಶ್ವಾಸಃ ಪೀಯೂಷಮಧುರಾಧರೇ ॥೧೧೯॥

ಹೇ ಪೀಯೂಷಮಧುರಾಧರೇ–ಅಮೃತದಂತೆಸಿಹಿಯಾದ ತುಟಿಗಳು ಳ್ಳಸ್ತ್ರೀಯೇ, ಕಟುತೈಲೇನ–ಸಾಸಿವೆಯೆಣ್ಣೆಯೊಡನೆ, ಸಂಯುಕ್ತಃ–ಕೂಡಿದ, ಗುಡಃ–ಬೆಲ್ಲವು, ಯಾವತ್–ಯಾವಕಾಲಪರ್ಯಂತವಾಗಿ, ನಸೇವಿತಃ–ಸೇವಿಸಲ್ಪಡುವದಿಲ್ಲವೋ, ತಾವತ್–ಅದುವರಿಗು, ಶ್ವಾಸಃ–ಉಬ್ಬಸವು, ನಶ್ಯತಿಕಿಂ–ನಾಶವಾಗುತಲಿದೆಯೇಯೇನು? ನಾಶವಾಗುವದಿಲ್ಲವೆಂದಭಿಪ್ರಾಯವು.

ಕಟುತೈಲ

ಸೇವಿತಂಮಧುಖಂಡಾಭ್ಯಾಂ ಚೂರ್ಣಂಮರಿಚಜಂಯದಿ ।
ಕಿಮರ್ಥಂಕ್ರಿಯತೇಚಿಂತಾ ಶ್ವಾಸಕಾಸಪರಾಜಿತೈಃ ॥ ೧೨೦ ॥

ಮರಿಚಜಂ–ಮೆಣಸುಗಳಿಂದ ಹುಟ್ಟಿದ, ಚೂರ್ಣಂ–ಪುಡಿಯು, ಮಧುಖಂಡಾಭ್ಯಾಂ–ಜೇನುತುಪ್ಪ ಕಲ್ಲುಸಕ್ಕರೆಗಳೊಡನೆ, ಸೇವಿತಂಯದಿ–ಭಕ್ಷಿಸಲ್ಪಟ್ಟದ್ದೇ ಆದರೆ, ಶ್ವಾಸಕಾಸಪರಾಜಿತೈಃ–ಕೆಮ್ಮು, ಉಬ್ಬಸಗಳಿಂದ ತಿರಸ್ಕೃತರಾದ ಜನರಿಂದ, ಕಿಮರ್ಥಂ – ಏತಕ್ಕೋಸ್ಕರ, ಚಿಂತಾ– ಆಲೋಚನೆಯು, ಕ್ರಿಯತೇ–ಮಾಡಲ್ಪಡುತಲಿದೆ. ಯಾವನಿಮಿತ್ತವಾಗಿಯೂ ಮಾಡಲ್ಪಡುವದಿಲ್ಲವೆಂದು ತಾತ್ಪರ್ಯವು.

ಮೆಣಸಿನ ಚೂರ್ಣ

ಅಯಿರತ್ನಕಳೇ ನೀಲನಳಿನಭದನೇಕ್ಷಣೇ ।
ಸಿಂಹೀಕಷಾಯಃ ಸಕಣಃ ಕಾಸಗ್ರಾಸಕರಃ ಕ್ಷಣಾತ್ ॥ ೧೨೧ ॥

ನೀಲನಳಿನಛದನೇಕ್ಷಣೇ : ನೀಲನಳಿನ-ನೀಲೋತ್ಪಲದ, ಛದನ-ಪತ್ರ ಸದೃಶವಾದ, ಈಕ್ಷಣೇ—ನೇತ್ರಗಳುಳ್ಳ, ಹೇರತ್ನಕಳೇ— ಎಲೇ ರತ್ನಕಳಾನಾಮಕಳಾದ ಸ್ತ್ರೀಯೇ! ಸಕಣಃ— ಹಿಪ್ಪಲೀಪುಡಿಯೊಡನೆಕೂಡಿದ, ಸಿಂಹೀ ಕಷಾಯಃ— ಹೆಗ್ಗುಳ್ಳದಕಷಾಯವು, ಕ್ಷಣಾತ್——ಕ್ಷಣಕಾಲದ್ದೆಸೆಯಿಂದ, ಕಾಸಗ್ರಾಸಕರಃ : ಕಾಸ—ಕೆಮ್ಮಿನ, ಗ್ರಾಸ—ನಾಶವನ್ನು, ಕರಃ—ಮಾಡುತಲಿರುವದು.

ಹೆಗ್ಗುಳ್ಳದ ಕಷಾಯ

ರಾವಣಸ್ಯಸುತೋ ಹನ್ಯಾನ್ಮುಖವಾರಿಜಧಾರಿತಃ ।
ಶ್ವಸನಂ ಕಸನಂ ವಾಪಿ ತಮಿವಾನಿಲನಂದನಃ ॥೧೨೨॥

ಮುಖವಾರಿಜಧಾರಿತಃ : ಮುಖವಾರಿಜ—ಮುಖಕಮಲದಲ್ಲಿ, ಧಾರಿತಃ— ಒತ್ತರಿಸಲ್ಪಟ್ಟ, ರಾವಣಸ್ಯಸುತಃ—ತಾರೇಕಾಯಿ, ಶ್ವಸನಂ—ಉಬ್ಬಸವನ್ನು, ಕಸನಂವಾಪಿ——ಕೆಮ್ಮನ್ನೂ ಕೂಡ, ಅನಿಲನಂದನಃ—ಆಂಜನೇಯನು, ತಮಿವ—ಆ ಅಕ್ಷಕುಮಾರನಂತೆ, ಹನ್ಯಾತ್——ನಾಶಮಾಡೀತು.

ತಾರೇಕಾಯಿಯ ಉಪಯೋಗ

ಗ್ರಂಥಾಂತರಸಮ್ಮತಿ

ಪಂಚಕಾಸಾನ್ನಿಹಂತ್ಯಾಶುಕೇವಲೋವಾವಿಭೀತಕಃ ।
ಅಯಿಪ್ರಾಣಪ್ರಿಯೇ ಜಾತೀಫಲಲೋಹಿತಲೋಚನೇ ।
ಶುಂಠೀಭಾರ್ಙ್ಗೀಕೃತಂಕ್ವಾಥಂ ಶ್ವಾಸತ್ರಾಸಾಯಪಾಯಯೇತ್ ॥೧೨೩॥

ಜಾತೀಫಲಲೋಹಿತಲೋಚನೇ—ಜಾಕಾಯಿಯಂತೆ ಕೆಂಪಾದ ಕಣ್ಣುಗಳುಳ್ಳ, ಅಯಿಪ್ರಾಣಪ್ರಿಯೇ-ಎಲೇ ಪ್ರಾಣಕಾಂತೆಯೇ! ಶುಂಠೀಭಾರ್ಙ್ಗೀಕೃತಂ : ಶುಂಠೀ—ಸುಂಟಿ, ಭಾರ್ಙ್ಗೀ— ಗಂಟುಭಾರಂಗಿ, ಇವುಗಳಿಂದ, ಕೃತಂ—ಮಾಡಲ್ಪಟ್ಟ, ಕ್ವಾಥಂ—ಕಷಾಯವನ್ನು, ಶ್ವಾಸತ್ರಾಸಾಯ : ಶ್ವಾಸ— ಉಬ್ಬಸದ, ತ್ರಾಸಾಯ—ನಾಶಕ್ಕೋಸ್ಕರ, ಪಾಯಯೇತ್—ಪಾನಮಾಡಿಸಬೇಕು.

ಶುಂಠ್ಯಾದಿ ಕಷಾಯ

ಅಸ್ತಿ ಪ್ರಾಣಪತೇ ಮಮ ಪ್ರಿಯತಮಾ ಕಂದರ್ಪಲೀಲಾ ಸಖೀ
ಕಾಸಕ್ಲೇಶವಶಾದತೀವಕೃಶತಾಂ ಪ್ರಾಪ್ತಾಹಿ ಸಾ ಸಾಂಪ್ರತಂ ।
ತಸ್ಯಾಸ್ತ್ವಂ ಕಥಯೋಪಚಾರಮಧುನಾ ಕ್ಷೌದ್ರಾನ್ವಿತೋದೀಯತಾಂ
ವಿಶ್ವಗ್ರಂಥಿಕಣಾಕಲಿದ್ರುಮಭವಶ್ಚೂರ್ಣಶ್ಚಕೋರೇಕ್ಷಣೇ ॥ ೧೨೪ ॥

ಶುಂಠ್ಯಾದಿಚೂರ್ಣ

ಹೇ ಪ್ರಾಣಪತೇ–ಎಲೈ ಪ್ರಾಣಕಾಂತನೇ! ಮಮ–ನನಗೆ, ಪ್ರಿಯತಮಾ–ಅತಿಪ್ರಿಯಳಾದ, ಕಂದರ್ಪಲೀಲಾ–ಕಂದರ್ಪಲೀಲೆಯೆಂಬ ಪ್ರಸಿದ್ಧಳಾದ, ಸಖೀ–ಸಂಗಾತಿಯು, ಅಸ್ತಿ–ಇದಾಳೆ. ಸಾ–ಆ ಸಂಗಾತಿಯು, ಕಾಸಕ್ಲೇಶವಶಾತ್ : ಕಾಸ–ಕೆಮ್ಮಿನಿಂದುಂಟಾದ, ಕ್ಲೇಶ-ದುಃಖದ, ವಶಾತ್–ಅಧೀನತ್ವದ್ದೆಸೆಯಿಂದ, ಸಾಂಪ್ರತಂ–ಈಗ, ಅತೀವ–ಅತ್ಯಂತವಾಗಿ, ಕೃಶತಾಂ–ಕಾರ್ಶ್ಯವನ್ನು, ಪ್ರಾಪ್ತಾಹಿ–ಹೊಂದಿದಾಳೆ. ತಸ್ಯಾಃ–ಆ ಸ್ತ್ರೀಗೆ, ತ್ವಂ–ನೀನು, ಅಧುನಾ–ಈಗ, ಉಪಚಾರಂ–ಔಷಧವನ್ನು, ಕಥಯ–ಹೇಳು. ಎಂಬುವುದು ಪ್ರಶ್ನೆಯು. ಹೇಚಕೋರೇಕ್ಷಣೇ–ಎಲೇ ಚಕೋರಪಕ್ಷಿಯ ಕಣ್ಣುಗಳಂತೆ ಕಣ್ಣುಗಳುಳ್ಳವಳೇ! ಕ್ಷೌದ್ರಾನ್ವಿತಂ–ಜೇನುತುಪ್ಪದೊಡನೆ ಕೂಡಿದ, ವಿಶ್ವಗ್ರಂಥಿಕಣಾಕಲಿದ್ರುಮಭವಃ : ವಿಶ್ವ – ಸುಂಟಿ, ಗ್ರಂಥಿ–ಮೋಡಿ, ಕಣಾ–ಹಿಪ್ಪಲಿ, ಕಲಿದ್ರುಮಃ–ತಾರೇಕಾಯಿ ಇವುಗಳಿಂದ, ಭವಃ–ಹುಟ್ಟಿದ, ಚೂರ್ಣಃ–ಪುಡಿಯು, ದೀಯತಾಂ–ಕೊಡಲ್ಪಡಲಿ ಎಂಬುವುದು ಉತ್ತರವು.

ಸಂಯುಕ್ತೋಗುಡಸರ್ಪಿಭ್ಯಾಂ ಚೂರ್ಣಸ್ತ್ರಿಕಟುಸಂಭವಃ ।
ನಿಹಂತಿತರಸಾಕಾಸಾನ್ ತ್ರಾಸಾನಿವಜನಾರ್ದನಃ ॥ ॥ ೧೨೫ ॥

ತ್ರಿಕಟುಚೂರ್ಣ

ಜನಾರ್ದನಃ–ಶ್ರೀಕೃಷ್ಣಸ್ವಾಮಿಯು, ತ್ರಾಸಾನಿವ – ಭಯಗಳನ್ನೋಪಾದಿಯಲ್ಲಿ, ಗುಡಸರ್ಪಿಭ್ಯಾಂ–ಬೆಲ್ಲ, ತುಪ್ಪಗಳೊಡನೆ, ಸಂಯುಕ್ತಃ–ಕೂಡಿದ, ತ್ರಿಕಟುಸಂಭವಃ. ತ್ರಿಕಟು–ಸುಂಟಿ, ಹಿಪ್ಪಲಿ, ಮೆಣಸುಗಳ ದೆಸೆಯಿಂದ, ಸಂಭವಃ–ಹುಟ್ಟಿದ, ಚೂರ್ಣಃ–ಪುಡಿಯು, ಕಾಸಾನ್–ಕೆಮ್ಮುಗಳನ್ನು, ತರಸಾ–ಶೀಘ್ರವಾಗಿ, ನಿಹಂತಿ–ನಾಶಮಾಡುತಲಿದೆ.

ಏಕಏವಾರ್ದ್ರಕರಸಸ್ಸಮಧುಶ್ಶ್ವಾಸಕಾಸಜಿತ್ ।
ರತಿವಲ್ಲಭಚಾಂಪೇಯಚಾಪಚಾರುಕಳೇಬರೇ ॥೧೨೬॥

ಹಸೀ ಶುಂಠೀರಸ ಪ್ರಯೋಗ

ಹೇರತಿವಲ್ಲಭಚಾಂಪೇಯಚಾಪಚಾರುಕಳೇಬರೇ : ರತಿವಲ್ಲಭ-ಮನ್ಮಥನ, ಚಾಂಪೇಯಚಾಪ – ಸಂಪಿಗೆಹೂವೆಂಬ ಬಿಲ್ಲಿನಂತೆ, ಚಾರು–ಸುಂದರವಾದ, ಕಳೇಬರೇ–ಶರೀರವುಳ್ಳ ಸ್ತ್ರೀಯೇ! ಸಮಧುಃ–ಜೇನುತುಪ್ಪದೊಡನೆ ಕೂಡಿದ, ಆರ್ದ್ರಕರಸಃ–ಹಸೀ ಸುಂಟೀರಸವು, ಏಕಏವ–ಒಂದೇ, ಶ್ವಾಸಕಾಸಜಿತ್ : ಶ್ವಾಸ–ಉಬ್ಬಸ, ಕಾಸ–ಕೆಮ್ಮು, ಇವುಗಳನ್ನು. ಜಿತ್–ನಾಶಮಾಡುತಲಿದೆ.

ಶೃಂಗಿಬೇರರಸೋಯೇನಮಧುನಾಸಹಸೇವಿತಃ ।
ಶ್ವಾಸಕಾಸಭಯಂತಸ್ಯ ನಕದಾಚಿತ್ಕೃಶೋದರಿ ॥೧೨೭॥

ಹಿಂದೆಹೇಳಿದ ಶ್ಲೋಕಾರ್ಥಕ್ಕೂ ಈ ಶ್ಲೋಕಾರ್ಥಕ್ಕೂ ಭೇದವಿಲ್ಲದ ಕಾರಣ ಟೀಕು ಬರೆಯಲಿಲ್ಲ.

ಪುಲೋಮಜಾವಲ್ಲಭಸೂನುಪತ್ನೀ ತಾತಾತ್ಮಭೂಶೇಖರವಾಹನಸ್ಯ ।
ಸೌಂದರ್ಯದೂರೀಕೃತರಾಮರಾಮೇ ಕಷಾಯಕಃಕಾಸಸಮೀರಸರ್ಪಃ ॥೧೨೮॥

ವಾಸಾ ಕಷಾಯ

ಸೌಂದರ್ಯದೂರೀಕೃತರಾಮರಾಮೇ : ಸೌಂದರ್ಯ–ಮನೋಹರತ್ವದಿಂದ, ದೂರೀಕೃತ–ತಿರಸ್ಕರಿಸಲ್ಪಟ್ಟ, ರಾಮರಾಮೇ–ಸೀತಾದೇವಿಯುಳ್ಳ ಸ್ತ್ರೀಯೇ! ಪುಲೋಮಜಾ–ಶಚೀದೇವಿಗೆ, ವಲ್ಲಭ–ಗಂಡನಾದ ಇಂದ್ರನಿಗೆ, ಸೂನು–ತಮ್ಮನಾದ ಶ್ರೀಮನ್ನಾರಾಯಣನ, ಪತ್ನೀ–ಹೆಂಡತಿಯಾದ ಲಕ್ಷ್ಮೀದೇವಿಗೆ, ತಾತ–ತಂದೆಯಾದ ಸಮುದ್ರನಿಗೆ, ಆತ್ಮಭೂ–ಮಗನಾದ ಚಂದ್ರನೇ, ಶೇಖರ–ಶಿರೋಭೂಷಣವಾಗುಳ್ಳ ಪರಮೇಶ್ವರನಿಗೆ, ವಾಹನಸ್ಯ–ವಾಹನಭೂತವಾದ ವೃಷಭವಂ ಬೋಧಿಸುವ ವೃಷಶಬ್ದವಾಚ್ಯವಾದ ಆಡುಸೋಗೆಯ, ಕಷಾಯಕಃ–ಕಷಾಯವು, ಕಾಸಸಮೀರಸರ್ಪಃ : ಕಾಸ–ಕೆಮ್ಮೆಂಬ, ಸಮೀರ–ವಾಯುವಿಗೆ, ಸರ್ಪಃ–ಸರ್ಪಭೂತವಾದದ್ದು.

ತಾತ್ಪರ್ಯ.—ಸರ್ಪವು ಹೇಗೆ ವಾಯುವಂ ಭಕ್ಷಿಸುತಲಿರುವದೋ ಹಾಗೆ ಈ ಕಷಾಯವು ಕೆಮ್ಮನ್ನು ನಾಶಮಾಡುವದು.

ನಿಘಂಟು॥ ಸೂನುಃಪುತ್ರೇನುಜೇರವೌ । ಉಪೇಂದ್ರಇಂದ್ರಾವರಜ ಇತಿವಿಶ್ವಾಮರೌ॥

ಅಯಿತಾಳಫಲಸ್ತನಿರತ್ನಕಳೇ ವೃಷವಾರಿಪಿಬೇನ್ಮಧುಮತ್ಕಸನೇ ।
ನವದಾಮಿಕದಾಪಿಬುಧಾಧಿಪತೇರಿದಮೌಷಧಮೋಷಧಿನಾಥಮುಖಿ ॥ ೧೨೯ ॥

ತಾಳಫಲಸ್ತನಿ-ತಾಳೇಹಣ್ಣಿನಂತಿರುವ ಕುಚಗಳುಳ್ಳ, ಅಯಿರತ್ನಕಳೇ-ಎಲೇ ರತ್ನಕಳಾನಾಮಕಳೆ, ಮಧುಮತ್—ಜೇನುತುಪ್ಪದೊಡನೆಕೂಡಿದ, ವೃಷವಾರಿ—ಆಡುಸೋಗೆಯ ಕಷಾಯವನ್ನು, ಕಸನೇ—ಕೆಮ್ಮಿನಲ್ಲಿ, ಪಿಬೇತ್—ಪಾನವಂ ಮಾಡಬೇಕು. ಹೇ ಓಷಧಿನಾಥಮುಖಿ—ಎಲೇ ಚಂದ್ರಮುಖಿಯೇ, ಇದಂ ಔಷಧಂ—ಈ ಮದ್ದನ್ನು, ಕದಾಪಿ—ಎಂದಿಗೂ, ಬುಧಾಧಿಪತೇಃ—ಇಂದ್ರನಿಗೂ, ನವದಾಮಿ—ಹೇಳುವದಿಲ್ಲ.

ಆಡುಸೋಗೆ ಕಷಾಯ

ಫಲತ್ರಯಛಿನ್ನರುಹಾಹುತಾಶ ರಾಸ್ನಾಕ್ರಿಮಿಧ್ವಂಸಿಕಟುತ್ರಯಾಣಾಂ ।
ಚೂರ್ಣಸ್ಸಮಾಂಶಸ್ಸಿತಯಾಸಮೇತಃ ಕಾಸಂಜಯೇನ್ನಾತ್ರವಿಚಾರಣೀಯಂ॥೧೩೦॥

ಸಮಾಂಶಃ—ಸಮತೂಕವಾದ, ಸಿತಯಾ—ಸಕ್ಕರೆಯೊಡನೆ, ಸಮೇತಃ ಕೂಡಿದ, ಫಲತ್ರಯ—ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟೆಗಳು, ಛಿನ್ನರುಹ—ಅಮೃತವಳ್ಳಿ, ಹುತಾಶ—ಚಿತ್ರಮೂಲ, ರಾಸ್ನಾ—ರಾಸ್ನೆ, ಕ್ರಿಮಿಧ್ವಂಸಿ—ವಾಯುವಿಳಂಗ, ಕಟುತ್ರಯಾಣಾಂ—ಸುಂಟಿ, ಹಿಪ್ಪಲಿ, ಮೆಣಸುಗಳು ಇವುಗಳ, ಚೂರ್ಣಃ—ಪುಡಿಯು, ಕಾಸಂ—ಕೆಮ್ಮನ್ನು, ಜಯೇತ್—ಜಯಿಸೀತು. ಅತ್ರ—ಈ ವಿಷಯದಲ್ಲಿ, ವಿಚಾರಣೀಯಂ—ಚರ್ಚಿಸಲು ಯೋಗ್ಯವಾದದ್ದು, ನ—ಇಲ್ಲ.

ತ್ರಿಫಲಾದಿಚೂರ್ಣ

ಶ್ಲೋಕ॥ ಸಿತಾಚತುರ್ಗುಣಾದೇಯಾಚೂರ್ಣಾಚ್ಚದ್ವಿಗುಣೋಗುಡಃ ।

ಎಂಬ ಶ್ಲೋಕಾರ್ಥಪ್ರಕಾರವಾಗಿ ಸಕ್ಕರೆಯನ್ನು ಬೆರೆಸಬೇಕು.

—ಇತಿ ಶ್ವಾಸಕಾಸ ಚಿಕಿತ್ಸಾ—

## ಅಥಾಮವಾತ ಚಿಕಿತ್ಸಾ.

ದಶಮೂಲಕಷಾಯಮಿಶ್ರಿತಂ ಪಾಲಲನೇ ವಿಶ್ವಕಷಾಯಮಿಶ್ರಿತಂವಾ ।
ಪ್ರಪಿಬೇತ್ಕಟಿವಸ್ತಿಕುಕ್ಷಿಶೂಲೇ ಧ್ರುವಮೇರಂಡಜತೈಲಮೇಕಮೇವ ॥೧೩೧॥

ಹೇಲಲನೇ—ಎಲೇಸ್ತ್ರೀಯೆ, ದಶಮೂಲ—ಹೆಗ್ಗುಳ್ಳ, ನೆಲಗುಳ್ಳ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ನೆಗ್ಗಿಲು, ಬೆಲ್ಲವತ್ತ, ಸಿವನಿ, ನರುವಲು, ಹೆಮ್ಮರ, ಪಾದ್ರಿಗಳ, ಕಷಾಯ—ಕಷಾಯದಿಂದ, ಮಿಶ್ರಿತಂವಾ—ಕೂಡಿರುವ, ವಾ—ಇಲ್ಲವೆ, ವಿಶ್ವ—ಸುಂಟಿಯ, ಕಷಾಯ—ಕಷಾಯದಿಂದ, ಮಿಶ್ರಿತಂ—ಕೂಡಿರುವ, ಏರಂಡಜತೈಲಂ—ಔಡ್ಲೆಣ್ಣೆಯನ್ನು, ಏಕಮೇವ—ಒಂದನ್ನೇ, ಕಟಿವಸ್ತಿಕುಕ್ಷಿಶೂಲೇ : ಕಟಿ-ನಡುವು, ವಸ್ತಿ—ನಾಭ್ಯಧಃಪ್ರದೇಶ, ಕುಕ್ಷಿ—ಹೊಟ್ಟೆ, ಇವುಗಳ, ಶೂಲೇ—ನೋವಿನಲ್ಲಿ, ಪ್ರಪಿಬೇತ್—ಪಾನವಂಮಾಡಬೇಕು.

## ಹರಳು. **Recinus Communis.** एरण्ड:.

**Constituents**:—Fixed oil 45 p.c., an inert alkaloid, recinin, proteids, 20 p.c.; Starch mucilage, sugar, ash 10 p.c.; also a poisonous albuminoid principle called recin.

**Actions and uses**.—All the constituents of the seeds except the oil are drastic, generally given with ginger tea or with decoction of deshmuladi Kvath. The oil is non-irritant; when it reaches the duodenum it is decomposed by the pancreatic juice into recinoleic acid which irritates the bowels, stimulates the intestinal glands and the muscular coat and cause purgation; it does not stimulate the liver. It acts in 4 or 5 hours, causing liquid stools without pain or griping and has a sedative effect on the intestines. With glycerine the effects of the oil are increased. Recinoleic acid is

absorbed into the blood tissues and is excreted with the human milk which, when sucked, imparts to the child its purgative action. Recin, a toxic ferment, is a violent irritant of the intestines, kidneys and bladder. It gives rise to inflammation of the bile duct and very often to jaundice and dysuria. The oil is best given in flatulence, costiveness, fever, rheumatism and in inflammation of the genito-urinary organs and nephritis, cystitis, gonorrhoea, calculi, stricture of rectum or urethra. In diarrhoea due to the presence of irritating substances in the intestines leading to congestion or to excessive secretions it acts without exhausting the strength. It is used after operations on the abdominal or pelvic viscera. It overcomes constipation of typhoid fever, during pregnancy and before labour and in post-partum conditions. In intestinal or renal colic it is given with the juice of fresh ginger with prompt relief. It expels lumbrici. In enteritis, peritonitis and dysentery it is given with laudanum. If depression exists, oil of turpentine 5 to 10 ms. may be added. A poultice of the crushed seeds is used to promote suppuration, to mature boils and to reduce gouty and rheumatic swellings; as a galactagogue varalians or poultices of the leaves are applied to inflamed breasts in women during lactation. Hot leaves are applied to the hypogastrium to increase the flow of menses. The root bark is an alterative and given in chronic skin diseases. (*Materia Medica of India*- **R.N. Khory, Part II, p. 553.**)

---

ರಾಸ್ನಾಮೃತಾನಾಗರದೇವದಾರು ಪಂಚಾಂಘ್ರಿಯುಗ್ಮೇಂದ್ರಯವೈಃಕಷಾಯಃ ।
ರುಬೂಕತೈಲೇನಸಮನ್ವಿತೋಽಯಂ ಭೇತ್ತಾಭವೇದಾಮಸಮೀರಣಸ್ಯ ॥ ೧೩೨ ॥

ರಾಸ್ನಾ—ರಾಸ್ನೆ, ಅಮೃತಾ—ಅಮೃತವಳ್ಳಿ, ನಾಗರ—ಸುಂಟಿ, ದೇವ
ರಾಸ್ನಾದಿಕಷಾಯ ದಾರು—ದೇವದಾರು, ಪಂಚಾಂಘ್ರಿಯುಗ್ಮ—ಮೇಲಣ ಶ್ಲೋಕದಲ್ಲಿ ಹೇಳಿರುವ ದಶಮೂಲ, ಇಂದ್ರಯವೈಃ—ಕೊಡಸಿಗೆಬೀಜ ಇವುಗಳಿಂದುಂಟಾದ, ರುಬೂಕ ತೈಲೇನ—ಹರಳೆಣ್ಣೆಯಿಂದ, ಸಮನ್ವಿತಃ—ಕೂಡಿದ, ಅಯಂಕಷಾಯಃ—ಈ ಕಷಾಯವು, ಆಮಸಮೀರಣಸ್ಯ—ಆಮವಾತಕ್ಕೆ, ಭೇತ್ತಾ—ನಾಶಕವಾದದ್ದು, ಭವೇತ್—ಆದೀತು.

ಶ್ಲೋಕ॥ ವಿಲಾಸಿನೀವಿಲಾಸೇನ ವಿಲಾಸಿಹೃದಯಂಯಥಾ ।
ತಥಾಗುಳೂಚೀವಿಶ್ವೇನ ಹರೇದಾಮಸಮೀರಣಂ ॥

ಎಂಬುವದು ಪ್ರಕ್ಷಿಪ್ತ ಶ್ಲೋಕವು.

—ಇತ್ಯಾಮವಾತ ಚಿಕಿತ್ಸಾ—

---

## ಅಥ ನೇತ್ರರೋಗ ಚಿಕಿತ್ಸಾ.

ಸಮ್ಯಕ್ಸ್ವಿನ್ನಾಃ ಸ್ವಗಣಕರಸೇ ಕಾಸನೋತ್ಥಾಃಕುಳುತ್ಥಾ
ಶ್ಚೇಲೇಬದ್ಧ್ವಾಪರಿಹೃತತುಷಾಃಪ್ರೌಢಸೀಮಂತಿನೀಭಿಃ ।
ಸೂಕ್ಷ್ಮಂಪಿಷ್ಟ್ವಾಃಪಟುರಸನಿಶಾಚೂರ್ಣಪೂರ್ಣಾಃಕ್ಷಪಾಯಾಂ
ಚಕ್ಷುಃಕ್ಷಿಪ್ತಾರುಧಿರವಿಕೃತಿಂಸಂಹರಂತಿತ್ರ್ಯಹೇಣ ॥೧೩೩॥

ಪ್ರೌಢಸೀಮಂತನೀಭಿಃ—ಪ್ರೌಢಸ್ತ್ರೀಯರಿಂದ, ಚೇಲೇ—ಬಟ್ಟೆಯಲ್ಲಿ,
ಬಧ್ವಾ—ಕಟ್ಟಿ, ಚಗಣಕರಸೇ—ಸಗಣಿಯರಸದಲ್ಲಿ,
ಕುಳುತ್ಥ(ಹುರುಳಿ) ಸಮ್ಯಕ್—ಚನ್ನಾಗಿ, ಸ್ವಿನ್ನಾಃ—ಸ್ವೇದನಮಾಡಲ್ಪಟ್ಟ,
ಯೋಗ (ಎಂದರೆ) ಒಂದು ಪಾತ್ರೆಯಲ್ಲಿ ಸಗಣಿರಸವನ್ನು ಹಿಂಡಿ ಅದಕ್ಕೆ ತಗಲದಹಾಗೆ ಹುರುಳೀಗಂಟನ್ನು ಇಳೀಬಿಟ್ಟು ಕಡಬಿನಂತೆ ಸ್ವಲ್ಪ ಬೇಯಿಸಲ್ಪಟ್ಟ ಎಂದು ತಾತ್ಪರ್ಯವು. ಪರಿಹೃತ

ತುಷಾಃ: ಪರಿಹೃತ—ತೆಗೆಯಲ್ಪಟ್ಟ, ತುಷಾಃ: ಹೊಟ್ಟುಗಳುಳ್ಳ, ಸೂಕ್ಷ್ಮಂ—ನುಣ್ಣಗೆ, ಪಿಷ್ಟಾಃ—ಅರೆಯಲ್ಪಟ್ಟ, ಪಟುರಸನಿಶಾಚೂರ್ಣಪೂರ್ಣಾಃ: ಪಟು—ಸೈಂಧವಲವಣ, ರಸ-ಬೋಳವೆಂಬ ರಸ, ನಿಶಾ-ಅರಿಸಿನ ಇವುಗಳ,ಚೂರ್ಣ—ಪುಡಿಗಳಿಂದ, ಪೂರ್ಣಾಃ—ತುಂಬಲ್ಪಟ್ಟ, ಕಾನನೋತ್ಥಾಃ—ಕಾಡಿನಲ್ಲಿಹುಟ್ಟಿದ, ಕುಳುತ್ಥಾಃ-ಹುರುಳಿಗಳು, ಕ್ಷಪಾಯಾಂ—ರಾತ್ರಿಯಲ್ಲಿ, ಚಕ್ಷುಃಕ್ಷಿಪ್ತಾಸ್ಸಂತಃ-ಕಣ್ಣಿನಲ್ಲಿ ಹಾಕಲ್ಪಟ್ಟವುಗಳಾಗಿ, ತ್ರ್ಯಹೇಣ—ಮೂರುದಿವಸಗಳಿಂದ, ರುಧಿರ ವಿಕೃತಿಂ—ನೇತ್ರಸಂಬಂಧಿಯಾದ ರಕ್ತಜಾಡ್ಯವನ್ನು, ಸಂಹರಂತಿ—ನಾಶ ಮಾಡುತಲಿವೆ.

ತಾತ್ಪರ್ಯ.—ಕಾಡುಹುರುಳಿಯನ್ನು ಸಗಣಿಯರಸದಲ್ಲಿ ಬೇಯಿಸಿ ಹೊಟ್ಟುತೆಗೆದು ಅರೆದು ಅದಕ್ಕೆ ಸೈಂಧವಲವಣ ಬೋಳರಸ ಅರಿಸಿನ ಇವುಗಳ ಚೂರ್ಣವಂಬೆರಸಿ ಮೂರುದಿವಸ ಕಣ್ಣಿಗೆ ಹಚ್ಚಲು ಕಣ್ಣಿನ ರಕ್ತಜಾಡ್ಯ ಪರಿಹಾರವಾಗುವದು. ಇಲ್ಲಿ ಹೆಂಗಸರು ಕೆಲಸಮಾಡುವದು ವಾಡಿಕೆಯಾದ್ದರಿಂದಲೂ, ಹುಡಿಗಿಯರಿಗೆ ಕೆಲಸಬಾರದೆ ಇರುವದರಿಂದಲೂ, ಪ್ರೌಢಸೀಮಂತನೀಭಿಃ ಎಂದು ಹೇಳಿರುತ್ತಾರೆ.

ಲೋಲಂಬರಾಜಕವಿನಾವನಿತಾವತಂಸ
  ಶಿಗ್ರೋರಮುಷ್ಯಕಥಿತೋಸ್ತಿಕಿಮುಪಯೋಗಃ ।
ಏತಸ್ಯಪಲ್ಲವರಸಾತ್ಸಮಧೋಃಕಿಮಸ್ಯ
  ರ್ದೃಗ್ವ್ಯಾಧಿಮಾತ್ರಹರಣೇಮಹಿಳಾಗ್ರಗಣ್ಯೇ ॥ ೧೩೪ ॥

ಶಿಗ್ರುಪಲ್ಲವರಸ

ಅಮುಷ್ಯ—ಈಪ್ರಸಿದ್ಧವಾದ, ವನಿತಾವತಂಸಶಿಗ್ರೋಃ: ವನಿತಾ—ಸ್ತ್ರೀಯರಿಗೆ, ಅವತಂಸ—ಕರ್ಣಭೂಷಣವಾದ, ಶಿಗ್ರೋಃ—ನುಗ್ಗೆಗೆ, ಉಪಯೋಗಃ—ಪ್ರಯೋಜನವು, ಲೋಲಂಬರಾಜಕವಿನಾ—ಲೋಲಂಬರಾಜಕವಿಯಿಂದ, ಕಥಿತಃ—ಹೇಳಲ್ಪಟ್ಟದ್ದಾಗಿ, ಅಸ್ತಿಕಿಮು—ಇದೆಯೋ ಏನು ? ಹೇಮಹಿಳಾಗ್ರಗಣ್ಯೇ—ಎಲೇ ಸ್ತ್ರೀಯರಲ್ಲಿ ಶ್ರೇಷ್ಠಳಾದವಳೇ! ದೃಗ್ವ್ಯಾಧಿಮಾತ್ರಹರಣೇ: ದೃಗ್ವ್ಯಾಧಿಮಾತ್ರ—ನೇತ್ರರೋಗಸಾಮಾನ್ಯದ, ಹರಣೇ—ನಾಶನಮಾಡುವವಿಷಯದಲ್ಲಿ, ಸಮಧೋಃ—ಜೇನುತುಪ್ಪದೊಡನೆ ಕೂಡಿದ, ಏತಸ್ಯ—ಈ ನುಗ್ಗೇ

ಚಿಗುರಿನ, ಪಲ್ಲವರಸಾತ್—ಎಲೆಯ ರಸಕ್ಕಿಂತಲೂ, ಅನ್ಯತ್—ಇತರವಾದ ಪದಾರ್ಥವು, ಕಿಂ—ಯಾವದಿದೆ, ಯಾವದೂ ಇಲ್ಲ.

ಈ ಶ್ಲೋಕದಲ್ಲಿ ಪೂರ್ವಾರ್ಧವು ಪ್ರಶ್ನೆಯೆಂದೂ, ಉತ್ತರಾರ್ಧವು ಉತ್ತರವೆಂದೂ ತಿಳಿಯಬೇಕು.

ಜಯತಿಮಾರುತಪಿತ್ತಕಫೈಃಕೃತಾಂ ಬಹುವಿಧಾಮಪಿ ಲೋಚನಯೋರ್ವ್ಯಥಾಂ ।
ನಯನಯೋರ್ವಿಹಿತೋ ಮಧುನಾನ್ವಿತೋ ಬಹುಳಪಲ್ಲವಪಲ್ಲವಜೋರಸಃ

॥ ೧೩೫ ॥

ಮಧುನಾ—ಜೇನುತುಪ್ಪದೊಡನೆಕೂಡಿದ, ಬಹುಳಪಲ್ಲವಪಲ್ಲವಜಃ— ಬಹುಳಪಲ್ಲವ—ನುಗ್ಗೇಗಿಡದ, ಪಲ್ಲವ—ಚಿಗುರುಗಳದೆಸೆ

ಶಿಗ್ರು (ನುಗ್ಗೆ) ಪಲ್ಲವರಸ

ಯಿಂದ, ಜಃ—ಹುಟ್ಟಿದ, ರಸಃ—ಸ್ವರಸವು, ನಯನಯೋಃ—ಕಣ್ಣುಗಳಲ್ಲಿ, ವಿಹಿತಃ—ಹಾಕಲ್ಪಟ್ಟಿಂಥಾದ್ದಾಗಿ, ಮಾರುತಪಿತ್ತಕಫೈಃ-ವಾತಪಿತ್ತಶ್ಲೇಷ್ಮಗಳಿಂದ, ಕೃತಾಂ-ಮಾಡಲ್ಪಟ್ಟ, ಬಹುವಿಧಾಂ—ಅನೇಕಪ್ರಕಾರವಾದ, ಲೋಚನಯೋಃ—ನೇತ್ರಗಳ, ವ್ಯಥಾಂ—ಜಾಡ್ಯವನ್ನು, ಜಯತಿ—ಜಯಿಸುತಲಿದೆ.

ಕುವಲಯನಯನೇಽರ್ಜುನಂ ಕಫೋಽಬ್ಧೇಸ್ಸಹಸಿತಯಾ ಶುಸಿರಾಚರೀಕರೋತಿ ।
ಪ್ರಿಯಕರಮಿವಕಾಮಿನೀ ನವೋಢಾ ಲಘುಕುಚಶಾಲಿನಿ ವಕ್ಷಸಿ

ಪ್ರಯುಕ್ತಂ ॥ ೧೩೬ ॥

ಅಲಘುಕುಚಶಾಲಿನಿ: ಅಲಘು—ದಪ್ಪವಾದ, ಕುಚ—ಸ್ತನಗಳಿಂದ, ಶಾಲಿನಿ—ಪ್ರಕಾಶಿಸುತ್ತಲಿರುವ, ಮತ್ತು ಕುವಲಯನ

ಸಮುದ್ರಫೇನ ಚೂರ್ಣ

ಯನೇ—ನೈದಿಲೇಹೂವಿನಂತಿರುವ ಕಣ್ಣುಗಳುಳ್ಳ ಎಲೇ ಸ್ತ್ರೀಯೇ, ಅಬ್ಧೇಃಕಫಃ-ಸಮುದ್ರದನೊರೆಯು, ಸಿತಯಾ ಸಹ—ಕೊಡೆಯಾಲಕಲ್ಲುಸಕ್ಕರೆಯೊಡನೆಕೂಡಿ, ಅರ್ಜುನಂ—ಅರ್ಜುನವೆಂಬ ನೇತ್ರಜಾಡ್ಯವನ್ನು, (ಎಂದರೆ) ಕಣ್ಣಿನಹೂವನ್ನು, ನವೋಢಾ—ಹೊಸದಾಗಿ ಮದುವೆಯಾದ ಹುಡಿಗಿಯು, ವಕ್ಷಸಿ—ಎದೆಯಲ್ಲಿ ಪ್ರಯುಕ್ತಂ—ಇರಿಸಲ್ಪಟ್ಟ, ಪ್ರಿಯಕರಮಿವ: ಪ್ರಿಯಃ—ಗಂಡನ, ಕರಮಿವ—

ಕ್ತಿಯುಂತೆ, ಆಶು–ಶೀಘ್ರವಾಗಿ, ನಿರಾಚರೀಕರೋತಿ– ತಿರಸ್ಕರಿಸುತಲಿದೆ. ಇಲ್ಲಿ ಕುವಲಯನಯನೇರ್ಜುನಂಸಖಂಡೋಜಲಧಿಕಫೋನಿತರಾಂನಿರಾಕರೋತಿ॥ ಎಂದು ಪಾಠಾಂತರ. ಹಂತ್ಯರ್ಜುನಂಶರ್ಕರಯಾಬ್ಧಿಫೇನಃ। ಎಂದು ಗ್ರಂಥಾಂತರ ಸಮ್ಮತಿ.

ನಿರಾಕರೋತಿನಕ್ತಾಂಧ್ಯಂ ಗೋಶಕೃತ್ಸಹಿತಾಕಣಾ ।
ರಮಣೀರಮಣಸ್ಯೇವ ಬಲಂಭುಕ್ತ್ವಾಪುನಃಪುನಃ ॥ ೧೩೭ ॥

**ಪಿಪ್ಪಲೀ ಚೂರ್ಣ ಪ್ರಯೋಗ**

ಗೋಶಕೃತ್ಸಹಿತಾ : ಗೋಶಕೃತ್ – ಹಸುವಿನ ಸಗಣೀರಸದೊಡನೆ ಸೇರಿದ, ಕಣಾ–ಹಿಪ್ಪಲೀಪುಡಿಯು, ನಕ್ತಾಂಧ್ಯಂ-ಸಂಜೆಗಣ್ಣೆಂಬ ನೇತ್ರಜಾಡ್ಯವನ್ನು, ಪುನಃಪುನಃ–ಬಾರಿಬಾರಿಗೂ, ಭುಕ್ತ್ವಾ–ಸಂಭೋಗಮಾಡಲ್ಪಟ್ಟ, ರಮಣೀ–ನಾಯಕಿಯು, ರಮಣಸ್ಯ–ನಾಯಕನ, ಬಲಮಿವ–ಶಕ್ತಿಯುಂತೆ, ನಿರಾಕರೋತಿ–ತಿರಸ್ಕರಿಸುತಲಿದೆ.

ಶ್ಯಾಮೇಶ್ಯಾಮೇ ಪ್ರಿಯಶ್ಯಾಮೇ ಶ್ಯಾಮಾಬೋಧಿತಮಾನಸೇ ।
ಶುಕ್ಲಂಶಮಯತಿಕ್ಷಿಪ್ರಂ ಮಾಕ್ಷಿಕೋಮಾಕ್ಷಿಕಾನ್ವಿತಃ ॥ ೧೩೮ ॥

**ಮಾಕ್ಷಿಕಪ್ರಯೋಗ**

ಶ್ಯಾಮಾಬೋಧಿತಮಾನಸೇ : ಶ್ಯಾಮಾ–ಅಪ್ರಸೂತೆಯರಾದ ಯೌವನಸ್ಥೆಯರಿಂದ, ಬೋಧಿತ-ಶಿಕ್ಷಿಸಲ್ಪಟ್ಟ, ಮಾನಸೇ-ಮನಸ್ಸುಳ್ಳವಳಾಗಿಯೂ, ಪ್ರಿಯಶ್ಯಾಮೇ : ಪ್ರಿಯ–ಇಷ್ಟರಾದ, ಶ್ಯಾಮೇ–ಹದಿನಾರುವರ್ಷವಯಸ್ಸಿನ ಸ್ತ್ರೀಯರುಳ್ಳವರಾಗಿಯೂ, (ಎಂದರೆ) ಯೌವನವತಿಗಳಿಂದ ಶೃಂಗಾರಾದಿವಿಷಯದಲ್ಲಿ ಉಪದೇಶಿಸಲ್ಪಟ್ಟವಳಾಗಿಯೂ, ಅಂಥಾ ಯೌವನವತಿಯರೇ ಸಖಿಗಳಾಗಿ ಉಳ್ಳವಳಾಗಿಯೂ ಇರತಕ್ಕವಳೆಂದು ತಾತ್ಪರ್ಯವು. ಅಶ್ಯಾಮೇ–ಕಪ್ಪುವರ್ಣಕ್ಕೆ ಭಿನ್ನವಾದ ಪೀತವರ್ಣವುಳ್ಳವಳಾಗಿಯೂ, ಶ್ಯಾಮೇ–ಯೌವನಮಧ್ಯಸ್ಥೆಯಾಗಿಯೂ (ಅಥವಾ) ಹದಿನಾರುವರ್ಷ ವಯಸ್ಸುಳ್ಳವಳಾಗಿಯೂ ಇರುವ ಎಲೇ ಸ್ತ್ರೀಯೇ! ಮಾಕ್ಷಿಕಾನ್ವಿತಃ–ಜೇನುತುಪ್ಪದೊಡನೆ ಕೂಡಿದ, ಮಾಕ್ಷಿಕಃ–ಹೇಮಮಾಕ್ಷಿಕವು, ಕ್ಷಿಪ್ರಂ–ಶೀಘ್ರವಾಗಿ, ಶುಕ್ಲಂ–ಕಣ್ಣಿನ

ಹೂವನ್ನು, ಶಮಯತಿ-ನಾಶಮಾಡುತ್ತಲಿದೆ. ಅಪ್ರಸೂತಾಭವೇಚ್ಛ್ಯಾಮಾ, ಶ್ಯಾಮಾಷೋಡಶವಾರ್ಷಿಕೀ, ಶ್ಯಾಮಾಯೌವನಮಧ್ಯಸ್ಥಾ ಎಂದು ನಿಘಂಟು.

ಇತಿನಿಗದಿತಮಾರ್ಯೈಸ್ಸೇವ್ಯಮಾನಾವಿಧತ್ತೇ
ನಿಶಿಸಮಧುಘೃತಾಗ್ರ್ಯಾದೃಗ್ವಿಕಾರಾಪಕರ್ಷಂ ॥
ಯದಿನಭವತಿಮುಗ್ಧೇ ತೇಸ್ವಸಾಹೋಕಿಮಗ್ರ್ಯಾ
ಜನಯತಿಬತಕಸ್ಮಾದ್ವೈಪರೀತ್ಯಂಪರಂತು ॥ ೧೩೯ ॥

ನಿಶಿ-ರಾತ್ರಿಯಲ್ಲಿ, ಸೇವ್ಯಮಾನಾ-ಭಕ್ಷಿಸಲ್ಪಡುತ್ತಿರುವ, ಅಥವಾ ಕಣ್ಣಿನಲ್ಲಿ ಹಾಕಲ್ಪಡುತ್ತಿರುವ, ಸಮಧುಘೃತಾ-ಹೆಚ್ಚು ತ್ರಿಫಲಾಚೂರ್ಣ ಕಡಿಮೆಯಾದ ಜೇನುತುಪ್ಪ ತುಪ್ಪಗಳೊಡನೆ ಕೂಡಿರುವ, ಅಗ್ರ್ಯಾ-ಅಳಲೇಕಾಯಿ, ತಾರೇಕಾಯಿ, ನೆಲ್ಲೀ ಚಟ್ಟು, ಇವುಗಳ ಚೂರ್ಣವು, ದೃಗ್ವಿಕಾರಾಪಕರ್ಷಂ-ದೃಗ್ವಿಕಾರನೇತ್ರರೋಗಗಳ, ಅಪಕರ್ಷಂ-ನಾಶನವನ್ನು, ವಿಧತ್ತೇ-ಮಾಡುತಲಿದೆ. ಮುಗ್ಧೇ-ಸುಂದರಿಯಾದ, ಭವತಿ-ಎಲೇ ಸ್ತ್ರೀಯೇ! ಅಗ್ರ್ಯಾ-ಶ್ರೇಷ್ಠಳಾದ, ತೇ-ನಿನ್ನ, ಸ್ವಸಾ-ತಂಗಿಯು, ಸೇವ್ಯಮಾನಾಯದಿ-ಸಂಭೋಗಿಸಲ್ಪಡುತ್ತಿರುವವಳಾದರೆ, ಪರಂ-ಅಧಿಕವಾದ, ವೈಪರೀತ್ಯಂ-ನೇತ್ರನಾಶಾದಿವಿಪರೀತಗುಣವನ್ನು, ಕಸ್ಮಾತ್-ಯಾತರ ದೆಸೆಯಿಂದಲಾದರೂ, ನಜನಯತಿಕಿಂ-ಹುಟ್ಟಿಸುವದಿಲ್ಲವೋ ಏನು? ಯಾತರ ದೆಸೆಯಿಂದಲಾದರೂ ಹುಟ್ಟಿಸಿಯಾಳೆಂದು ತಾತ್ಪರ್ಯವು. ಅಹೋ-ಆಶ್ಚರ್ಯವು, ಬತ-ಕಷ್ಟವು.

ತಾತ್ಪರ್ಯ.—ಅಗ್ರ್ಯ ಪದವಾಚ್ಯವಾದ ತ್ರಿಫಲೆಯು ಸೇವಿಸಲ್ಪಟ್ಟರೆ, ನೇತ್ರಜಾಡ್ಯವು ಹೇಗೆ ವಾಸಿಯಾಗುವದೋ ಹಾಗೆ ಅಗ್ರ್ಯಪದವಾಚ್ಯಳಾದ ನಿನ್ನ ತಂಗಿಯು ಶಾಸ್ತ್ರವಿರುದ್ಧವಾಗಿ ಅನುಭವಿಸಲ್ಪಟ್ಟರೆ ನೇತ್ರಜಾಡ್ಯ ವಾಸಿಯಾಗುವದೇ ಏನು? ವಾಸಿಯಾಗಲಾರದು. ಇನ್ನೇನಾಗುವದೆಂದರೆ ನೇತ್ರನಾಶವೇ ಆಗುವದೆಂದು ಮುಖ್ಯತಾತ್ಪರ್ಯವು. ಈ ವಿಷಯದಲ್ಲಿ

ಶ್ಲೋ ॥ ಭ್ರಮಕ್ಲಮೋರುದೌರ್ಬಲ್ಯಂಬಲಧಾತ್ವಿಂದ್ರಿಯಕ್ಷಯಃ ।
ಅಪರ್ವಮರಣಂಚಸ್ಯಾದನ್ಯಥಾಗಚ್ಛತಃಸ್ತ್ರಿಯಂ ॥

ಎಂದು ಬಾಹಟಾಚಾರ್ಯರು ಹೇಳಿರುವರು. ಈ ಶ್ಲೋಕಕ್ಕೆ ಅನೇಕರು ಅನೇಕ ಪ್ರಕಾರವಾಗಿ ಅರ್ಥ ಹೇಳಿದಾಗ್ಯೂ ನನಗೆ ತಿಳಿದದ್ದನ್ನು ನಾನು ಬರೆದಿದ್ದೇನೆ.

—ಇತಿ ನೇತ್ರರೋಗ ಚಿಕಿತ್ಸಾ—

---

## ಅಥಕಾಮಿಲಾ ಚಿಕಿತ್ಸಾ.

ದೇವತಾಳೀಫಲರಸೋ ನಸ್ಯತೋಹಂತಿಕಾಮಿಲಾಂ ।
ಸಂದೇಹೋನಾತ್ರಸಂಫುಲ್ಲನೀಲೋತ್ಪಲವಿಲೋಚನೇ ॥ ೧೪೦ ॥

ದೇವದಾಳೀ ಹಣ್ಣಿನ ರಸದ ನಸ್ಯ

ಸಂಫುಲ್ಲನೀಲೋತ್ಪಲವಿಲೋಚನೆ: ಸಂಫುಲ್ಲ–ಅರಳಿರುವ, ನೀಲೋತ್ಪಲ-ಕನ್ನೈದಿಲೆಹೂವಿನಂತಿರುವ, ವಿಲೋಚನೇ-ಕಣ್ಣುಗಳುಳ್ಳ ಸ್ತ್ರೀಯೋ! ದೇವತಾಳೀಫಲರಸಃ-ದೇವದಾಳೀ ಹಣ್ಣಿನರಸವು, ನಸ್ಯತಃ-ಮೂಗಿಗೆ ಹಿಂಡೋಣದರದೆಸೆಯಿಂದ, ಕಾಮಿಲಾಂ-ಕಾಮಾಲೇಜಾಡ್ಯವನ್ನು, ಹಂತಿ–ನಾಶಮಾಡುತಲಿದೆ. ಅತ್ರ–ಈ ವಿಷಯದಲ್ಲಿ, ಸಂದೇಹಃ–ಸಂಶಯವು, ನ–ಇಲ್ಲ.

ತ್ರಿಫಲಾವೃಷಭೂನಿಂಬ ನಿಂಬತಿಕ್ತಾಮೃತಾಕೃತಃ ।
ಕ್ವಾಥೋಮಧುಸಮಾಯುಕ್ತಃ ಕಾಮಿಲಾಪಾಂಡುರೋಗಜಿತ್ ॥ ೧೪೧ ॥

ತ್ರಿಫಲಾದಿ ಕ್ವಾಥ; ತ್ರಿಫಲಾಕಷಾಯ

ತ್ರಿಫಲಾವೃಷಭೂನಿಂಬನಿಂಬತಿಕ್ತಾಮೃತಾಕೃತಃ: ತ್ರಿಫಲಾ– ಅಳಲೇಕಾಯಿ, ತಾರೇಕಾಯಿ, ನೆಲ್ಲೀಚಟ್ಟು, ವೃಷ–ಆಡುಸೋಗೆ, ಭೂನಿಂಬ–ನೆಲಬೇವು, ನಿಂಬ-ಬೇವು, ತಿಕ್ತಾ-ಕಟುಕರೋಹಿಣಿ, ಅಮೃತಾ–ಅಮೃತವಳ್ಳಿ ಇವುಗಳಿಂದ, ಕೃತಃ-ಮಾಡಲ್ಪಟ್ಟ, ಮಧುಸಮಾಯುಕ್ತಃ-ಜೇನುತುಪ್ಪದೊಡನೆ ಕೂಡಿದ, ಕ್ವಾಥಃ-ಕಷಾಯವು, ಕಾಮಿಲಾಪಾಂಡುರೋಗಜಿತ್-ಕಾಮಾಲೆಯೆಂಬ ಪಾಂಡುವೆಂಬ ರೋಗಗಳನ್ನು ಜಯಿಸುವದು.

ಗಿರಿಮೃದ್ರಾತ್ರಿಧಾತ್ರೀಣಾ ಮಂಜನಂಕಾಮಿಲಾಪಹಂ ।
ಇದಂಯದಿಭವೇನ್ಮಿಥ್ಯಾ ಶಪಥೋಸ್ತುತವಾಂಗನೇ ॥ ೧೪೨ ॥

ಅಂಗನೇ—ಎಲೇ ಸ್ತ್ರೀಯೇ! ಗಿರಿಮೃದ್ರಾತ್ರಿಧಾತ್ರೀಣಾಂ: ಗಿರಿಮೃತ್—ಕಾವಿಕಲ್ಲು, ರಾತ್ರಿ—ಅರಿಸಿನ, ಧಾತ್ರೀಣಾಂ – ನೆಲ್ಲೀ ಚಟ್ಟು, ಇವುಗಳ ಪುಡಿಗಳ, ಅಂಜನಂ—ಅಂಜನವು, ಕಾಮಿಲಾಪಹಂ – ಕಾಮಾಲೆಯುನ್ನು ನಾಶಮಾಡುವದು. ಇದಂ— ಈ ಮಾತು, ಮಿಥ್ಯಾಯದಿಭವೇತ್—ಸುಳ್ಳಾದರೆ, ತವ—ನಿನ್ನ, ಶಪಥಃ—ಆಣೆಯು, ಅಸ್ತು—ಆಗಲಿ. (ಎಂದರೆ) ನಿನ್ನಾಣೆಗೂ ಈ ಮಾತು ಸುಳ್ಳಲ್ಲವೆಂದು ತಾತ್ಪರ್ಯವು. ಶಪನಂಶಪಥಃಪುಮಾ ಎಂದಮರವು.

ಅಂಜನ

ಅಯೀಮನೋಜ್ಞಕುಂಡಲೇ ಸ್ಫುರನ್ಮುಖೇಂದುಮಂಡಲೇ ।
ಗವಾಂಪಯಸ್ಸನಾಗರಂಪ್ರಿಯೇ ನಿಹಂತಿಕಾಮಿಲಾಂ ॥ ೧೪೩ ॥

ಮನೋಜ್ಞಕುಂಡಲೇ: ಮನೋಜ್ಞ—ಮನೋಹರವಾದ, ಕುಂಡಲೇ—ಓಲೆಗಳುಳ್ಳವಳಾಗಿಯೂ, ಸ್ಫುರನ್ಮುಖೇಂದುಮಂಡಲೇ! ಸ್ಫುರತ್—ಪ್ರಕಾಶಮಾನವಾದ, ಮುಖೇಂದುಮಂಡಲೆ ಚಂದ್ರಬಿಂಬದಹಾಗಿರುವ ಮುಖವುಳ್ಳವಳಾಗಿಯೂ ಇರುವ, ಅಯೇಪ್ರಿಯೇ—ಎಲೇ ಪ್ರಾಣವಲ್ಲಭೆಯೇ, ಸನಾಗರಂ—ಸುಂಟೀ ಚೂರ್ಣದೊಡನೆ ಕೂಡಿದ, ಗವಾಂಪಯಃ—ಹಸುವಿನಹಾಲು, ಕಾಮಿಲಾಂ—ಕಾಮಾಲೆಯುನ್ನು, ಹಂತಿ—ನಾಶಮಾಡುತಲಿದೆ.

ಗೋದುಗ್ಧಯೋಗ

—ಇತಿ ಕಾಮಿಲಾಚಿಕಿತ್ಸಾ—

---

## ಅಥ ಪ್ರದರಾದಿ ಚಿಕಿತ್ಸಾ.

ಪಿಚುಮಂದರಸೇನಮಿಶ್ರಿತೈಃ ಪಿಚುಮಂದಾನಿಲಶತ್ರುಬೀಜಕೈಃ ।
ಘಟಿತಾಂವಟಿಕಾಂಭಗಾಂತರೇಭಗಶೂಲಪ್ರಶಮಾಯಧಾರಯೇತ್ ॥ ೧೪೪ ॥

ಪಿಚುಮಂದರಸೇನ–ಕಡವದಮರದ ಸೊಪ್ಪಿನ ರಸದಿಂದ, ಮಿಶ್ರಿತೈಃ-ಬೆರಸಲ್ಪಟ್ಟ, ಪಿಚುಮಂದಾನಿಲಶತ್ರುಬೀಜಕೈಃ : ಪಿಚು

ಪಿಚುಮಂದಾದಿವಟಿ

ಮಂದ–ಬೇವು, ಅನಿಲಶತ್ರು–ಹರಳು, ಇವುಗಳ ಬೀಜಗಳ ಪುಡಿಯಿಂದ, ಘಟಿತಾಂ–ಮಾಡಲ್ಪಟ್ಟ, ವಟಿಕಾಂ– ಗುಳಿಗೆಯನ್ನು, ಭಗಾಂತರೇ–ಯೋನಿಯೊಳಗೆ, ಭಗಶೂಲಪ್ರಶಮಾಯ – ಯೋನಿಶೂಲೆಯ ನಿವಾರಣೆಗೋಸ್ಕರ, ಧಾರಯೇತ್ – ಧರಿಸಬೇಕು.

ತರುಣ್ಯುತ್ತರಣೀಮೂಲಂ ಛಾಗೀಸರ್ಪಿಸ್ಸಮನ್ವಿತಂ ।
ಶಿವಶಸ್ತ್ರಾಭಿಧಾಂಬಾಧಾಂ ಯೋನಿಸ್ಥಾಂಹಂತಿಸತ್ವರಂ ॥ ೧೪೫ ॥

ತರುಣಿ–ಎಲೇ ಸ್ತ್ರೀಯೇ, ಛಾಗೀಸರ್ಪಿಸ್ಸಮನ್ವಿತಂ : ಛಾಗೀ–ಆಡಿನ, ಸರ್ಪಿಃ–ತುಪ್ಪದಿಂದ, ಸಮನ್ವಿತಂ–ಕೂಡಿದ, ಉತ್ತ

ಉತ್ತರಣೆಯಚೂರ್ಣ

ರಣೀಮೂಲಂ–ಉತ್ತರಣಿಬೇರಿನ ಪುಡಿಯು, ಯೋನಿಸ್ಥಾಂ – ಯೋನಿಯಲ್ಲಿರುವ, ಶಿವಶಸ್ತ್ರಾಭಿಧಾಂ –ಶಿವಶಸ್ತ್ರಶೂಲವೆಂಬ, ಅಭಿಧಾಂ–ಹೆಸರುಳ್ಳ, ಬಾಧಾಂ–ವ್ಯಥೆಯನ್ನು, ಸತ್ವರಂ–ಜಾಗ್ರತೆಯಾಗಿ, ಹಂತಿ–ನಾಶಮಾಡುತಲಿದೆ.

## ಉತ್ತರಣೆ. Achyranthes aspera. अपामार्गः

It possesses valuable medicinal properties as a pungent and laxative, and is considered useful in dropsy, piles, boils, eruptions of the skin, etc. The seeds and leaves are considered emetic, and are useful in hydrophobia and snake-bites. (**T.N. Mukerji's** *Amsterdam Catalogue.*)

The dried plant is given to children for colic and also as an astringent in gonorrhoea. (**Stewart's** *Punjab Plants.*)

**Major Madden** says that the flowering spikes are regarded as a protective against scorpions, the insects being paralysed through the presence of a twig. The ash yields a large quantity of potash, rendering it useful in the arts as well as in medicine. Mixed with orpiment this ash is used externally in the treatment of ulcers, and of warts on the penis and other parts of the body. (**U. C. Dutt.**)

**Dr. Bidie** says: "Various English practitioners agree as to its marked diuretic properties in the form of a decoction."

**Dr. Cornish** reports favourably, having found it efficacious in the treatment of dropsy.

**Dr. Shortt** reports on its use as an external applicant in the treatment of the bites of insects; and **Dr. Turner** calls attention to it as a remedy in snake-bite (*Pharm. Indica.*)

Used in cases of abscess; its ashes are used in cases of asthma and cough. (**Ibbetson's** *Gujrat.*)

In Sind, it is used by the native foresters as an application to wounds caused by Babool thorns (**Murray,** p. 101).

To an infusion of the root is ascribed a mild astringent virtue. (*Honigberger, Vol. II, p. 222*).

The flowering spike made into pills with a little sugar is a popular preventive medicine in Behar for persons bitten by rabid dogs. (**Balfour.**)

**Dr. Lal Mohan Ghoshal,** in "*Food and Drugs*" for Oct. 1912, pp. 84-85, writes:—

"The drug may be useful in all conditions arising from nervousness. Thus it is used as a talisman in hysteria, and I know personally of cases that were benefited by it. How it acts in such a way, I cannot say; it may be possible that the good effects are obtained by ionisation only, if anything of such nature there is in the drug. But that it is undoubtedly useful in hysteria and such nervous disorders, there is no gainsaying. In hysteria what we find is that there is extreme nervous sensibility attended with muscular contraction, either violent or mild; it is preceded generally by irregular heart or palpitation."

## ಸ್ತನ್ಯದೋಷ ಚಿಕಿತ್ಸಾ.

ಗೋಪೀವೃಕೀದಾರುಕಿರಾತಮೂರ್ವಾ
ತಿಕ್ತಾಮೃತಾವಿಶ್ವಘನೇಂದ್ರಜಾನಾಂ ।
ಕ್ವಾಥೋಯಮುಕ್ತೋ ಮೃಗಲೋಚನಾನಾಂ
ದುಷ್ಟಸ್ಯದುಗ್ಧಸ್ಯವಿಶೋಧನಾಯ ॥ ೧೪೬ ॥

ಗೋಪ್ಯಾದಿಕಷಾಯ

ಗೋಪೀವೃಕೀದಾರುಕಿರಾತಮೂರ್ವಾ ತಿಕ್ತಾಮೃತಾವಿಶ್ವಘನೇಂದ್ರಜಾನಾಂ: ಗೋಪೀ – ನೆಲಮಾಗಳಿ, ವೃಕೀ—ಅಗಳು ಶುಂಠಿ, ದಾರು—ದೇವದಾರು, ಕಿರಾತ—ನೆಲಬೇವು, ಮೂರ್ವಾ—ಕೊರಟಿಗೆ, ತಿಕ್ತಾ—ಕಟುಕರೋಹಿಣಿ, ಅಮೃತಾ-ಅಮೃತವಳ್ಳಿ, ವಿಶ್ವ—ಸುಂಟಿ, ಘನ—ಕೊನ್ನಾರಿಗೆಡ್ಡೆ, ಇಂದ್ರಜಾನಾಂ—ಕೊಡಸಿಗೇಬೀಜ ಇವುಗಳ, ಕ್ವಾಥಃ—ಕಷಾಯವು, ಮೃಗಲೋಚನಾನಾಂ—ಸ್ತ್ರೀಯರ, ದುಷ್ಟಸ್ಯ—ದುಷ್ಟವಾದ, ದುಗ್ಧಸ್ಯ—ಸ್ತನ್ಯದ, ವಿಶೋಧನಾಯ—ಶುದ್ಧಿಗೋಸ್ಕರ, ಉಕ್ತಃ—ಹೇಳಲ್ಪಟ್ಟಿದೆ.

---

## ಅಥ ಪ್ರದರರೋಗ ಚಿಕಿತ್ಸಾ.

ಕಟಂಕಟೇರೀರಸಜಾಬ್ದವಾಶಾ
ಭೂನಿಂಬಭಲ್ಲೀತಿಲಜಃಕಷಾಯಃ ।
ಕ್ಷೌದ್ರಾನ್ವಿತಶ್ಚಂಚಲಲೋಚನಾನಾಂ
ನಾನಾವಿಧಾನಿಪ್ರದರಾಣಿ ಹನ್ಯಾತ್ ॥ ೧೪೭ ॥

ಕ್ಷೌದ್ರಾನ್ವಿತಃ: ಕ್ಷೌದ್ರ–ಜೇನುತುಪ್ಪದೊಡನೆ. ಅನ್ವಿತಃ–ಕೂಡಿದ, ಕಟಂಕಟೇರೀರಸಜಾಬ್ದವಾಶಾಭೂನಿಂಬಭಲ್ಲೀತಿಲಜಃ

ಮರದರಿಸಿನದ ಕಷಾಯ

ಕಟಂಕಟೇರೀ – ಮರದರಿಸಿನ, ರಸಜ–ರಸಾಂಜನ, ಅಬ್ದ–ಕೊನ್ನಾರೆಗೆಡ್ಡೆ, ವಾಶಾ–ಆಡುಸೋಗೆ, ಭೂನಿಂಬ–ನೆಲಬೇವು, ಭಲ್ಲೀ–ಗೇರು, ತಿಲ–ಎಳ್ಳು, ಇವುಗಳಿಂದ, ಜಃ–ಹುಟ್ಟಿದ, ಕಷಾಯಃ– ಕಷಾಯುವು, ಚಂಚಲಲೋಚನಾನಾಂ–ಸ್ತ್ರೀಯರ, ನಾನಾವಿಧಾನಿ–ನಾನಾಪ್ರಕಾರಗಳಾದ, ಪ್ರದರಾಣಿ–ಯೋನಿಜಾಡ್ಯಗಳನ್ನು, ಹನ್ಯಾತ್–ನಾಶಮಾಡೀತು.

ಈ ವಿಷಯದಲ್ಲಿ ಬೊಪ್ಪದೇವನು

ದಾರ್ವೀಭೂನಿಂಬಭಲ್ಲೀತಿಲವೃಷರಸಜಾಬ್ದಂ ಸಮುಧ್ವಸ್ಯಯೋನೌ ।

ಎಂತಲೂ, ಚಕ್ರದತ್ತನು

ದಾರ್ವೀರಸಾಂಜನವೃಷಾಬ್ದಕಿರಾತಬಿಲ್ವ
ಭಲ್ಲಾತಕೈರಥಿಕೃತೋ ಮಧುನಾಕಷಾಯಃ ।

ಎಂತಲೂ ಹೇಳಿದಾರೆ.

ಕುವಲಯದಳನೇತ್ರೇತಂಡುಲೀಯಸ್ಯ ಮೂಲಂ
ರಸಜಮಪಿಸಮಾಂಶಂಭೇಷಜದ್ವಂದ್ವಮೇತತ್ ।
ಮುಕರಮುಖಿಯುಕ್ತಂತಂಡುಲಾಂಭೋಮಧುಭ್ಯಾಂ
ಪ್ರದರದರಮುದೀರ್ಣಂ ಸುಂದರೀಣಾಂನಿಹಂತಿ ॥ ೧೪೮ ॥

ಕುವಲಯದಳನೇತ್ರೇ : ಕುವಲಯ–ನೈದಿಲೇಹೂವಿನ, ದಳ–ಎಸಳು ಗಳಂತಿರುವ, ನೇತ್ರೇ—ಕಣ್ಣುಗಳುಳ್ಳವಳಾಗಿಯೂ, ಹಿಮಕರಮುಖಿ–ಚಂದ್ರನಂತಿರುವ ಮುಖವುಳ್ಳವಳಾಗಿಯೂ ಇರುವ ಎಲೇಸ್ತ್ರೀಯೇ, ತಂಡುಲಾಂಭೋಮಧುಭ್ಯಾಂ : ತಂಡುಲಾಂಭಃ–ಅಕ್ಕೀ ತೊಳದನೀರು, ಮಧುಭ್ಯಾಂ-ಜೇನುತುಪ್ಪ, ಇವುಗಳಿಂದ, ಯುಕ್ತಂ–ಕೂಡಿದ, ಸಮಾಂಶಂ–ಸಮಭಾಗವುಳ್ಳ, ತಂಡುಲೀಯಸ್ಯ–ಕಿರುಕುಸಾಲೆಯ, ಮೂಲಂ–ಬೇರಿನ ಪುಡಿಯಾಗಲಿ, ರಸಾಂಜನಮಪಿ–ರಸಾಂಜನವಾಗಲಿ, ಏತತ್–ಈ, ಭೇಷಜದ್ವಂದ್ವಂ–ಎರಡೌಷಧವು, ಸುಂದರೀಣಾಂ–ಸ್ತ್ರೀಯರ, ಉದೀರ್ಣಂ—ಅಧಿಕವಾದ, ಪ್ರದರದರಂ-–ಯೋನಿಜಾಡ್ಯದಿಂದುಂಟಾದ ಭಯವನ್ನು, ನಿಹಂತಿ–ನಾಶಮಾಡುತಲಿದೆ.

ಕಿರುಕುಸಾಲೆ ಮತ್ತು ರಸಾಂಜನಗಳ ಉಪಯೋಗ

ಶ್ಲೋ॥ ಅಯಿಸರೋರುಹಸೋದರಲೋಚನೇ ಸರಸತಂಡುಲಕಾಂಘ್ರಿಭವಂರಜಃ ।
ಸಮಧುತಂಡುಲವಾರಿನಿವಾರಯೇನ್ಮೃಗದೃಶಾಂಪ್ರದರಪ್ರದರಂದ್ರುತಂ ॥

ಎಂಬ ಪ್ರಕ್ಷಿಪ್ತಶ್ಲೋಕವು ಮೇಲಣ ಶ್ಲೋಕಾರ್ಥವನ್ನೇ ಬೋಧಿಸುವುದರಿಂದ ಇದಕ್ಕೆ ಅರ್ಥವನ್ನು ಬರೆಯಲಿಲ್ಲ.

---

## ಅಥಾರ್ತವನಿರೋಧ ಚಿಕಿತ್ಸಾ.

ಮೂಲಂಗವಾಕ್ಷ್ಯಾಃಸ್ಮರಮಂದಿರಸ್ಥಂ
ಪುಷ್ಪಾವರೋಧಸ್ಯವಧಂಕರೋತಿ ।
ಅಭರ್ತೃಕಾಣಾಂವ್ಯಭಿಚಾರಿಣೀನಾಂ
ಯೋಗೋಯಮುಕ್ತೋದ್ರುತಗರ್ಭಪಾತೇ ॥ ೧೪೯ ॥

ಸ್ಮರಮಂದಿರಸ್ಥಂ–ಯೋನಿಯಲ್ಲಿ ಲೇಪಿಸಲ್ಪಟ್ಟ, ಗವಾಕ್ಷ್ಯಾಃ–ಹೆಮ್ಮೆಕ್ಕೆ (ಅಥವಾ) ಕಪಿಮೆಕ್ಕೆಯ, ಮೂಲಂ–ಬೇರಿನ ಪುಡಿಯು, ಪುಷ್ಪಾವರೋಧಸ್ಯ–ಋತುಬಂಧಕ್ಕೆ (ಎಂದರೆ) ಗರ್ಭನಿಲ್ಲದೆ ಇರುವಾಗ ಸಂಭವಿಸುವ ಸ್ತ್ರೀಯರ ಮುಟ್ಟುನಿಲ್ಲುವಿಕೆಗೆ, ವಧಂ–ನಾಶವನ್ನು, ಕರೋತಿ–

ಕಪಿಮೆಕ್ಕೆಯ ಪ್ರಯೋಜನವು

ಮಾಡುತಲಿದೆ. ಅಭರ್ತೃಕಾಣಾಂ—ಗಂಡನಿಲ್ಲದ, ವ್ಯಭಿಚಾರಿಣೀನಾಂ—ಕುಲಟೀಯರ, ದ್ರುತಗರ್ಭಪಾತೆ: ದ್ರುತ—ಶೀಘ್ರವಾಗಿ, ಗರ್ಭಪಾತೇ—ಗರ್ಭಪಾತವಾಗುವ ವಿಷಯದಲ್ಲಿಯೂ, ಅಯಂಯೋಗಃ—ಈ ಪ್ರಯೋಗವು, ಉಕ್ತಃ—ಹೇಳಲ್ಪಟ್ಟಿದೆ.

## ಅಥ ಗರ್ಭಿಣೀಸೂತಿಕಾ ಬಾಲಚಿಕಿತ್ಸಾ.

ಮಧ್ವಾಜ್ಯಯಷ್ಟೀಮಧುಲುಂಗಮೂಲಂ ನಿಪೀಯಸೂತೇಸುಮುಖೀಸುಖೇನ।
ಸತಂಡುಲಾಂಭಸ್ಸಿತಧಾನ್ಯಕಲ್ಕಪಾನಾದ್ವಮಿರ್ಗಚ್ಛತಿಗರ್ಭಿಣೀನಾಂ ॥ ೧೫೦ ॥

ಸುಮುಖೀ—ಸ್ತ್ರೀಯು, ಮಧ್ವಾಜ್ಯಯಷ್ಟೀಮಧುಲುಂಗಮೂಲಂ: ಮಧ್ವಾಜ್ಯ—ಸ್ವಲ್ಪ ಹೆಚ್ಚು ಕಡಿಮೆಯಾದ ಜೇನುತುಪ್ಪಗಳು, ಮತ್ತು, ಯಷ್ಟೀಮಧು—ಅತಿಮಧುರ, ಲುಂಗಮೂಲಂ—ಮಾದಳದಬೇರು ಇವುಗಳ ಕಲ್ಕವನ್ನು, ನಿಪೀಯ—ಪಾನಮಾಡಿ, ಸುಖೇನ—ಅನಾಯಾಸದಿಂದ, ಸೂತೇ—ಹೆರುತ್ತಾಳೆ. ಸತಂಡುಲಾಂಭಸ್ಸಿತಧಾನ್ಯಕಲ್ಕಪಾನಾತ್: ಸತಂಡುಲಾಂಭಃ—ಅಕ್ಕಿ ಕಲಗಚ್ಚಿನೊಡನೆ ಕೂಡಿದ, ಸಿತ—ಸಕ್ಕರೆ, ಧಾನ್ಯ—ಕೊತ್ತುಂಬರಿಬೀಜ ಇವುಗಳ, ಕಲ್ಕಪಾನಾತ್—ಕಲ್ಕವನ್ನು ಕುಡಿಯೋಣದರದೆಸೆಯಿಂದ, ಗರ್ಭಿಣೀನಾಂ—ಬಸುರಿಯರ, ವಮಿಃ—ವಮನವು, ಗಚ್ಛತಿ—ನಾಶವಾಗುತಲಿದೆ. ಎಂದು ಪ್ರಸಕ್ತಾನುಪ್ರಸಕ್ತ್ಯಾ ಗರ್ಭಿಣೀಚಿಕಿತ್ಸೆಯನ್ನು ಹೇಳಿದನು, ಇಲ್ಲಿ ಸತಂಡುಲಾಂಭಃ ಎಂಬ ಸ್ಥಳದಲ್ಲಿ ಸಶಬ್ದಕ್ಕೆ ಈಷದರ್ಥಕತ್ವವನ್ನು ಹೇಳಿ ಸ್ವಲ್ಪ ಕಲಗಚ್ಚು ಎಂದು ಟೀಕಿಸಬಹುದು.

ಜೇನುತುಪ್ಪ ತುಪ್ಪಗಳನ್ನು ಚೂರ್ಣ ಪ್ರಮಾಣಕ್ಕೆ ನಾಲ್ಕು ಭಾಗ ಹೆಚ್ಚಾಗಿ ಹಾಕಬೇಕು.

ಕರ್ಷಚೂರ್ಣಸ್ಯ ಕಲ್ಕಸ್ಯ ಘುಟಿಕಾನಾಂಚಸರ್ವಶಃ।
ದ್ರವ್ಯಶಕ್ತ್ಯಾಸಲೇಢವ್ಯಃ ಪಾತವ್ಯಶ್ಚ ಚತುರ್ಗುಣಃ॥

ಅಲ್ಪಾಬ್ದಾಂಬುದ್ವಯಾರಳ್ವಮೃತವಿಷಬಲಾ ರೇಣುದುಸ್ಪರ್ಶಶೀತಃ
ಗರ್ಭಿಣ್ಯಾ ಸೂತಿಕಾಯಾ ಅಪಿರುಧಿರರುಗಾಮಾತಿಸಾರಜ್ವರಘ್ನಃ।
ಮುಸ್ತಾಶೃಂಗೀವಿಷಾಣಾಂ ಪ್ರಶಮಯತಿ ರಜಸ್ಸೇವಿತಂ ಕ್ಷೌದ್ರಯುಕ್ತಂ
ಬಾಲಾನಾಂ ವಾಂತಿಕಾಸ ಜ್ವರಮತಿವಿಷಜಂಕ್ಷೌದ್ರಯುಕ್ತಂರಜೋವಾ ॥ ೫೧॥

ಅಲ್ಲಾಬ್ದಾಂಬುದ್ವಯಾರಳ್ವಮೃತವಿಷಬಲಾರೇಣುದುಸ್ಪರ್ಶಶೀತಃ : ಅಲ್ಲ – ಕೊತ್ತುಂಬರೀಬೀಜ, ಅಬ್ದ – ಕೊನ್ನಾರೆಗೆಡ್ಡೆ, ಅಂಬುದ್ವಯ – ಲಾಮಂಚ ಮುಡಿವಾಳಗಳು, ಅರಳು–ನರುವಲು, ಅಮೃತ–ಅಮೃತವಳ್ಳಿ, ವಿಷ–ಅತಿಬಜೆ, ಬಲಾ–ಕಳ್ಳಂಗಡಲೆ, ರೇಣು–ಪರ್ಪಾಷ್ಟಕ, ದುಸ್ಪರ್ಶ–ತುರುಚ ಇವುಗಳ, ಶೀತಃ–ಶೀತಕಷಾಯವು, ಗರ್ಭಿಣ್ಯಾಃ–ಬಸುರಿಗಾದರೂ, ಸೂತಿಕಾಯಾಅಪಿ–ಬಾಣಂತಿಗಾದರೂ, ರುಧಿರರುಗಾಮಾತಿಸಾರಜ್ವರಘ್ನಃ : ರುಧಿರರುಕ್–ರಕ್ತಸ್ರಾವಜಾಡ್ಯ, ಆಮಾತಿಸಾರಜ್ವರ ಇವುಗಳನ್ನು, ಘ್ನಃ–ನಾಶಮಾಡುತಲಿದೆ. ಕ್ಷೌದ್ರಯುಕ್ತಂ–ಜೇನುತುಪ್ಪದೊಡನೆಕೂಡಿದ, ಮುಸ್ತಾಶೃಂಗೀವಿಷಾಣಾಂ : ಮುಸ್ತಾ–ಕೊನ್ನಾರೆಗೆಡ್ಡೆ, ಶೃಂಗೀ–ಕರ್ನಾಟಕ ಶೃಂಗಿ, ವಿಷಾಣಾಂ–ಅತಿಬಜೆ ಇವುಗಳ, ರಜಃ–ಚೂರ್ಣವಾಗಲಿ, ಕ್ಷೌದ್ರಯುಕ್ತಂ–ಜೇನುತುಪ್ಪದೊಡನೆ ಕೂಡಿದ, ಅತಿವಿಷಜಂ – ಅತಿಬಜೆಯಿಂದುಂಟಾದ, ರಜೋವಾ–ಚೂರ್ಣವಾಗಲಿ, ಸೇವಿತಂ–ಸೇವಿಸಲ್ಪಟ್ಟದ್ದಾಗಿ, ಬಾಲಾನಾಂ – ಮಕ್ಕಳ, ವಾಂತಿಕಾಸಜ್ವರಂ : ವಾಂತಿ – ವಮನ, ಕಾಸ–ಕೆಮ್ಮು, ಜ್ವರ–ಜ್ವರ ಇವುಗಳನ್ನು, ಪ್ರಶಮಯತಿ–ಹೋಗಲಾಡಿಸುತ್ತದೆ.

ಕೃಷ್ಣಾರುಣಾಮುಸ್ತಕಶೃಂಗಿಕಾಣಾಂ
ತುಲ್ಯೇನ ಚೂರ್ಣೇನ ಸಮಾಕ್ಷಿಕೇನ।
ಜ್ವರಾತಿಸಾರಃ ಪ್ರಶಮಂ ಪ್ರಯಾತಿ
ಸಶ್ವಾಸಕಾಸಸ್ಸವಮಿಶ್ಶಿಶೂನಾಂ ॥

ಕುಮಾರಾತಿಸಾರೇಕಷಾಯಸ್ಸಮಂಗಾ
ಮದಾಶಾರಿಬಾಲೋಧ್ರಜಃಕ್ಷೌದ್ರಯುಕ್ತಃ।
ಮದಾಬಿಲ್ವಲೋಧ್ರೇಭಕೃಷ್ಣಾಂಬುದಾನಾಂ
ಕಷಾಯಾವಲೇಹೌ ತಥಾ ಕ್ಷೌದ್ರಯುಕ್ತೌ ॥

ಎಂಬ ಎರಡು ಶ್ಲೋಕಗಳು ಪ್ರಕ್ಷಿಪ್ತಗಳಾಗಿರುವವಾದ್ದರಿಂದ ಇವುಗಳಿಗೆ ಅರ್ಥ ಬರೆಯಲಿಲ್ಲ.

—ಇತಿ ಪ್ರದರಗರ್ಭಿಣೀಸೂತಿಕಾ ಬಾಲಚಿಕಿತ್ಸಾ—

# ಅಥ ಕ್ಷಯಚಿಕಿತ್ಸಾ.

ವಿದ್ವಲ್ಲಲಾಮ ಲೋಲಂಬನೃಪತೇವಾಗ್ವಿಲಾಸತಃ |
ನತೃಪ್ತಿರ್ಜಾಯತೇ ಸ್ವಾಮಿನ್ ಪುನಃಕಿಂಚಿನ್ನಿರೂಪಯ ॥ ೧೫೨ ॥

ವಿದ್ವಲ್ಲಲಾಮ-ವಿದ್ವಚ್ಛ್ರೇಷ್ಠನಾಗಿಯೂ, ಲೋಲಂಬನೃಪತೇ-ಲೋಲಂಬರಾಜನಾಮಕನಾಗಿಯೂ ಇರುವ, ಸ್ವಾಮಿನ್-ಎಲೈ ಪತಿಯೇ! ತೇ-ನಿನ್ನ, ವಾಗ್ವಿಲಾಸತಃ-ಇದುವರಿಗೂ ಹೇಳಿದ ಮಾತಿನ ಚಮತ್ಕಾರದಿಂದ, ತೃಪ್ತಿಃ-ಸಾಕುಯೆಂಬ ಬುದ್ಧಿಯು (ಅಥವಾ) ಇಚ್ಛಾನಿವೃತ್ತಿಯು, ನಜಾಯತೇ-ಉಂಟಾಗುವುದಿಲ್ಲ. ಪುನಃ - ಮತ್ತು, ಕಿಂಚಿತ್-ಕೆಲವು ವಚನವನ್ನು, ನಿರೂಪಯ-ಹೇಳು, ಎಂಬುದಾಗಿ ಧತ್ನಕಳೆಯು ಪ್ರಶ್ನೆಮಾಡಿದಳು.

ಕ್ಷಯೋತ್ಪತ್ತಿ ವಿನಾಶಾಯ ಸಿಂಹಾಸ್ಯಸ್ಸೇವ್ಯತಾಂ ಸದಾ |
ಬಹೂನಾಮತ್ರವಿಶ್ವಾಸೋಜಾತಃ ಕಮಲಲೋಚನೇ ॥ ೧೫೩ ॥

ಆಡುಸೋಗೆ ಪ್ರಯೋಗ

ಹೇ ಕಮಲಲೋಚನೇ - ಎಲೇ ಕಮಲಾಕ್ಷಿಯೇ! ಕ್ಷಯೋತ್ಪತ್ತಿ ವಿನಾಶಾಯ : ಕ್ಷಯ- ಕ್ಷಯರೋಗದ, ಉತ್ಪತ್ತಿ-ಹುಟ್ಟುವಿಕೆಯ, ವಿನಾಶಾಯ - ನಾಶಕ್ಕೋಸ್ಕರ, ಸಿಂಹಾಸ್ಯಃ - ಆಡುಸೋಗೆಯು, ಸದಾ - ಯಾವಾಗಲೂ, ಸೇವ್ಯತಾಂ-ಸೇವಿಸಲ್ಪಡಲಿ. ಅತ್ರ-ಈ ಔಷಧಿಯಲ್ಲಿ, ಬಹೂನಾಂ-ಅನೇಕರಿಗೆ, ವಿಶ್ವಾಸಃ-ನಂಬಿಗೆಯು, ಜಾತಃ-ಹುಟ್ಟಿರುವುದು. ಈ ಔಷಧ ಸೇವನೆಯಿಂದ ಕ್ಷಯರೋಗ ನಾಶವಾಗುವದೆಂದು ಬಹು ಜನರು ನಂಬಿರುವರೆಂದು ತಾತ್ಪರ್ಯ (ಇದೊಂದರ್ಥವು). ಕ್ಷಯೋತ್ಪತ್ತಿ-ಜನನಮರಣ ಪ್ರವಾಹರೂಪವಾದ ಸಂಸಾರದ, ವಿನಾಶಾಯ-ನಾಶಕ್ಕೋಸ್ಕರ, ಸಿಂಹಾಸ್ಯಃ - ನೃಸಿಂಹಸ್ವಾಮಿಯು, ಸದಾ - ನಿರಂತರದಲ್ಲಿಯೂ, ಸೇವ್ಯತಾಂ-ಭಜಿಸಲ್ಪಡಲಿ. ಅತ್ರ-ಈ ನೃಸಿಂಹಸ್ವಾಮಿಯಲ್ಲಿ, ಬಹೂನಾಂ-ಅನೇಕರಿಗೆ, ವಿಶ್ವಾಸಃ-ಭಕ್ತಿಯು, ಜಾತಃ - ಉಂಟಾಗಿರುವದೆಂದು ಮತ್ತೊಂದರ್ಥ.

———

## ಆಡುಸೋಗೆ. Adhatoda Vasica, Justica Adhatoda.

### वासकः

The leaves and the root of this plant are considered a very efficacious remedy for all sorts of coughs, being administered along with ginger.

The *Pharm. Indica* states that strong testimony has been given in favor of its remedial properties, drawn from personal experience, in the treatment of chronic bronchitis, asthma, etc., when not attended with febrile action. The flowers and the fruit are bitter, aromatic and antispasmodic. The fresh flowers are bound over the eyes in cases of ophthalmia.

"The flowers, leaves, and root, but especially the first, are supposed to possess antispasmodic qualities."

"They are bitterish and subaromatic and are administered in infusion and electuary as anthelmintic." (**Ainslie.**)

The leaves are used as a cattle medicine; in the case of man for rheumatism; and the flowers for ophthalmia. (**Stewart.**)

The leaves dried and made into cigarettes are smoked in asthma and their juice is used for diarrhoea and dysentery. It has expectorant and antispasmodic properties, and its use has been recommended in the treatment of colds, coughs, asthma, phthisis, and even diphtheria, in which it deserves

more extended trial. It is said, also, to be a valuable antiseptic, antiperiodic, and anthelmintic.

In the *Second Report of the Indigenous Drugs Committee*, p. 35, "**Lieutenant-Colonel Lee** reported that it was a useful expectorant. **Major Crawford** reported that the drug was tried in several cases in the form of a tincture; it acted well in the latter in the stages of acute bronchitis. ········ **Captain Stewart,** who used half drachm in a few cases of bronchitis and pneumonia, reported that it is as effective as Ipecacuanha."

**Dr. Rusby** states that "It appears to be toxic to all forms of life, in direct proportion to their lowness in the scale, and that this property is unique among plants........ ......The leaves are found to completely destroy the lower aquatics and to prevent their re-appearance. Laid upon fruits and other perishable substances they, to a great extent, prevent mould and decay. They check the development of parasitic diseases on vegetation. The very extended use of this plant in India in the treatment of tuberculosis and other respiratory diseases may be founded upon this property."

"It is probable", **writes Dr. Watt,** "we have in Adhatoda an antiseptic at the door of every Indian peasant. An aqueous solution of the alcoholic extract of the leaves was tried upon flies, fleas, mosquitoes, centipedes and other insects, and in every case the application met with poisonous results."

ಅಯಿಸುಂದರಿ ಸುಂದರಾನನೇ ರುಚಿರಾಪಾಂಗತರಂಗಲೋಚನೇ ।
ನವನೀತಮಧೂಪಲಾಶನಾದ್ದ್ವಿಜರಾಜಸ್ಯ ಭವೇತ್ ಕ್ಷಯಕ್ಷಯಃ ॥ ೧೫೪ ॥

ರುಚಿರಾಪಾಂಗತರಂಗಲೋಚನೇ : ರುಚಿರ – ರಮಣೀಯಗಳಾದ, ಅಪಾಂಗತರಂಗ-ತೆರೆಗಳಂತಿರುವ ಕೊನೆಗಳುಳ್ಳ, ಲೋಚನೇ–ಕಣ್ಣುಗಳುಳ್ಳವಳಾಗಿಯೂ, ಸುಂದರಾನನೇ–ಮನೋಹರವಾದ ಮುಖವುಳ್ಳವಳಾಗಿಯೂ ಇರುವ, ಅಯಿಸುಂದರಿ–ಎಲೇ ಸ್ತ್ರೀಯೇ! ನವನೀತಮಧೂಪಲಾಶನಾತ್ : ನವನೀತ–ಬೆಣ್ಣೆ, ಮಧು–ಜೇನುತುಪ್ಪ, ಉಪಲ–ಕಲ್ಲುಸಕ್ಕರೆ ಇವುಗಳ, ಅಶನಾತ್–ಭಕ್ಷಣೆಯ ದೆಸೆಯಿಂದ, ದ್ವಿಜರಾಜಸ್ಯ–ಚಂದ್ರನಿಗೆ, ಕ್ಷಯಕ್ಷಯಃ–ಕ್ಷಯರೋಗನಾಶವು, ಭವೇತ್–ಆದೀತು.

ತಾತ್ಪರ್ಯ.—ಚಂದ್ರನಿಗೂ ಕೂಡ ಕ್ಷಯರೋಗಜಾಡ್ಯ ನಾಶನವಾಗುವುದೆಂದು ಹೇಳಿದ್ದರಿಂದ ಮನುಷ್ಯರಿಗೆ ಕ್ಷಯಜಾಡ್ಯ ನಾಶವಾಗುವದೆಂದು ಹೇಳತಕ್ಕದ್ದೇನಿದೆ.

—ಇತಿ ಕ್ಷಯಚಿಕಿತ್ಸಾ—

---

## ಅಥ ವ್ರಣಚಿಕಿತ್ಸಾ.

ಅಯಿಕೋಮಲಕುಂತಲಾವಳೀ ವಿಲಸನ್ಮಾಲತಿಕಾಮನೋಹರೇ ।
ತ್ರಿಫಲಾಜನಿತಃ ಕಷಾಯಕಸ್ಸಹಿತೋಗುಗ್ಗುಳುನಾ ವ್ರಣಂಜಯೇತ್ ॥ ೧೫೫ ॥

ಗುಗ್ಗುಳಯುಕ್ತ ತ್ರಿಫಲಾ ಕಷಾಯವು

ಕೋಮಲಕುಂತಲಾವಳೀವಿಲಸನ್ಮಾಲತಿಕಾಮನೋಹರೇ: ಕೋಮಲ–ಮನೋಹರವಾದ, ಕುಂತಲ – ಕುರುಳುಗಳ, ಆವಳೀ–ಗುಂಪಿನಲ್ಲಿ, ವಿಲಸತ್–ಪ್ರಕಾಶಿಸುತಲಿರುವ, ಮಾಲತಿಕಾ–ಜಾಜೀಹೂವ್ವುಗಳಿಂದ, ಮನೋಹರೇ–ರಮಣೀಯಳಾದ, ಅಯಿ–ಎಲೇ ಸ್ತ್ರೀಯೇ! ಗುಗ್ಗುಳುನಾ–ಗುಗ್ಗುಳದ ಪುಡಿಯೊಡನೆ, ಸಹಿತಃ–ಕೂಡಿದ, ತ್ರಿಫಲಾಜನಿತಃ : ತ್ರಿಫಲಾ – ಅಳಲೇಕಾಯಿ, ತಾರೇಕಾಯಿ, ನೆಲ್ಲೀಚೆಟ್ಟು

ಗಳಿಂದ, ಜನಿತಃ—ಹುಟ್ಟಿದ, ಕಷಾಯಕಃ— ಕಷಾಯವು, ವ್ರಣಂ—ವ್ರಣವನ್ನು , ಜಯೇತ್—ಜಯಿಸೀತು.

—ಇತಿ ವ್ರಣಚಿಕಿತ್ಸಾ—

---

## ಅಥ ಮೇದೋವೃದ್ಧಿ ಚಿಕಿತ್ಸಾ.

ಮದನಜ್ವರಕಾರಿನಾಮಧೇಯೇ ರಸಿಕೇ ರತ್ನಕಳೇ ಪ್ರಭಾತಕಾಲೇ ।
ಶಿಶಿರಾಂಬುಪಿಬನ್ಮಧುಪ್ರಯುಕ್ತಂ ಗಣನಾಥೋಪಿಭವೇತ್ಕಿಲಾಸ್ಥಿಶೇಷಃ ॥೧೫೬॥

ಮದನಜ್ವರಕಾರಿನಾಮಧೇಯೇಃಮದನಜ್ವರ-ಮನ್ಮಥಜ್ವರವನ್ನು,ಕಾರಿ-ಉಂಟುಮಾಡುತಲಿರುವ, ನಾಮಧೇಯೇ—ನಾಮಧೇಯವುಳ್ಳವಳೇ (ಎಂದರೆ) ನಾಮಶ್ರವಣಮಾತ್ರದಿಂದಲೇ ಕಾಮೋದ್ರೇಕವನ್ನುಂಟುಮಾಡುತಲಿರುವಳೇ ಯೆಂದು ತಾತ್ಪರ್ಯವು. ರಸಿಕೇ-ಶೃಂಗಾರಾದಿರಸಗಳನ್ನು ತಿಳಿದಿರುವ, ರತ್ನಕಳೇ—ರತ್ನಕಳಾನಾಮಕಸ್ತ್ರೀಯೇ,ಪ್ರಭಾತಕಾಲೇ-ಪ್ರಾತಃಕಾಲದಲ್ಲಿ, ಮಧುಪ್ರಯುಕ್ತಂ—ಜೇನುತುಪ್ಪದೊಡನೆಕೂಡಿದ, ಅಂಬುಃ—ತಣ್ಣೀರನ್ನು, ಪಿಬ್—ಪಾನಮಾಡುತಲಿರುವ, ಗಣನಾಥೋಪಿ—ಗಣಪತಿಯಾದರೂ ಕೂಡ, ಅಸ್ಥಿಶೇಷಃ—ಮೂಳೆಗಳೇ ಶೇಷವಾಗುಳ್ಳವನು, ಭವೇತ್ಕಿಲ—ಆಗುತ್ತಾನೆಯಲ್ಲವೆ, ಹೀಗಿರುವಲ್ಲಿ ಮಿಕ್ಕಾದವರು ಕೃಶರಾಗುತ್ತಾರೆಂದು ಹೇಳತಕ್ಕದ್ದೇನೆಂದು ತಾತ್ಪರ್ಯವು.

—ಇತಿ ಮೇದೋವೃದ್ಧಿ ಚಿಕಿತ್ಸಾ—

---

## ಅಥ ಕ್ರಿಮಿ ಚಿಕಿತ್ಸಾ.

ತ್ರಿಕಟುತ್ರಿಫಲಾಕಳಿಂಗನಿಂಬತ್ರಿವೃದುಗ್ರಾಖದಿರೋದ್ಭವಃಕಷಾಯಃ ।
ಪಶುಮೂತ್ರಸಮನ್ವಿತೋನಿಪೀತಃ ಕ್ರಿಮಿಕೋಟೀರಪಿಹಂತಿಹಂತವೇಗಾತ್
॥ ೧೫೭ ॥

ತ್ರಿಕಟುತ್ರಿಫಲಾಕಳಿಂಗನಿಂಬತ್ರಿವೃದುಗ್ರಾಖದಿರೋದ್ಭವಃ: ತ್ರಿಕಟು– ಶುಂಠಿ, ಮೆಣಸು, ಹಿಪ್ಪಲಿ, ತ್ರಿಫಲಾ–ಅಳಲೇಕಾಯಿ, ತಾರೇಕಾಯಿ, ನೆಲ್ಲೀಚೆಟ್ಟು, ಕಳಿಂಗ–ಕೊಡಸಿಗೆಬೀಜ, ನಿಂಬ–ಬೇವಿನಸಪಟ್ಟೆ, ತ್ರಿವೃತ್–ತಿಗಡೆ, ಉಗ್ರಾ–ಬಜೆ, ಖದಿರ- ಕಗ್ಗಲೀಚಕ್ಕೆ, ಇವುಗಳಿಂದ, ಉದ್ಭವಃ-ಹುಟ್ಟಿದ, ಪಶುಮೂತ್ರಸಮನ್ವಿತಃ–ಗೋಮೂತ್ರದೊಡನೆ ಕೂಡಿದ, ಕಷಾಯಃ– ಕಷಾಯವು. ನಿಪೀತಃ–ಕುಡಿಯಲ್ಪಟ್ಟದ್ದಾಗಿ, ವೇಗಾತ್–ಬೇಗ, ಕ್ರಿಮಿ ಕೋಟೀರಪಿ-ಅನೇಕಕ್ರಿಮಿಗಳನ್ನಾದರೂ, ಹಂತಿ-ನಾಶಮಾಡುಲಿದೆ, ಹಂತ- ಈ ವಿಷಯದಲ್ಲಿ ಸಂತೋಷವು.

ತ್ರಿಕಟು ತ್ರಿಫಲಾದಿ ಕಷಾಯ

—ಇತಿ ಕ್ರಿಮಿಚಿಕಿತ್ಸಾ—

---

## ಅಥ ಮುಖಪಾಕಚಿಕಿತ್ಸಾ.

ಜಾತಿಪ್ರವಾಳತ್ರಿಫಲಾಯವಾಸಾ ದಾರುತ್ರಿಯಾಮಾಮೃತಗೋಸ್ತನೀನಾಂ ।
ಕಷಾಯಕಃಕ್ಷೌದ್ರಯುತೋನಿಹಂತಿ ಮುಖಸ್ಯಪಾಕಂಮುಖಪಂಕಜಸ್ಥಃ
॥ ೧೫೮ ॥

ಜಾತಿಪ್ರವಾಳತ್ರಿಫಲಾಯವಾಸಾ ದಾರುತ್ರಿಯಾಮಾಮೃತಗೋಸ್ತ ನೀನಾಂ: ಜಾತಿಪ್ರವಾಳ– ಜಾಜೀಚಿಗುರು (ಅಥವಾ) ಜಾಯಿಪತ್ರೆ, ತ್ರಿಫಲಾ–ಅಳಲೇಕಾಯಿ, ತಾರೇಕಾಯಿ, ನೆಲ್ಲೀಚೆಟ್ಟು, ಯವಾಸಾ–ತುರುಚನಬೇರು, ದಾರುತ್ರಿ ಯಾಮಾ – ಮರದರಿಸಿನ, ಅಮೃತ – ಅಮೃತವಳ್ಳಿ, ಗೋಸ್ತನೀನಾಂ–ದ್ರಾಕ್ಷಿ ಇವುಗಳ, ಕಷಾಯಕಃ–ಕಷಾ ಯವು, ಕ್ಷೌದ್ರಯುತಃ–ಜೇನುತುಪ್ಪದೊಡನೆ ಕೂಡಿದ್ದಾಗಿ, ಮುಖಪಂಕ ಜಸ್ಥಃ – ಬಾಯಲ್ಲಿರಿಸಲ್ಪಟ್ಟದ್ದಾದರೆ, ಮುಖಸ್ಯಪಾಕಂ–ಆಸ್ಯಪಾಕವನ್ನು, ನಿಹಂತಿ–ನಾಶಮಾಡುತಲಿದೆ.

ಜಾತಿಪ್ರವಾಳ ತ್ರಿಫಲಾದಿ ಕಷಾಯ

—ಇತಿ ಮುಖಪಾಕಚಿಕಿತ್ಸಾ—

## ಅಥ ಪ್ರಮೇಹಚಿಕಿತ್ಸಾ.

ಸ್ಫುರತ್ಸುಂದರೋದಾರ ಮಂದಾರದಾಮ
ಪ್ರಕಾಮಾಭಿರಾಮಸ್ತನದ್ವಂದ್ವಮಧ್ಯೇ ।
ಹರಿದ್ರಾರಜೋಮಾಕ್ಷಿಕಾಭ್ಯಾಂ ವಿಮಿಶ್ರ
ಶ್ಶಿವಾಯಾಃಕಷಾಯಃ ಪ್ರಮೇಹಾಪಹಾರೀ ॥ ೧೫೯ ॥

ನೆಲ್ಲೀಕಾಯಿ ಕಷಾಯ

ಸ್ಫುರತ್ – ಪ್ರಕಾಶಮಾನವಾದ, ಸುಂದರ – ರಮಣೀಯವಾದ, ಉದಾರ – ಶ್ರೇಷ್ಠವಾದ, ಮಂದಾರ – ಪಾರಿಜಾತದ ಹೂವಿನ, ದಾಮ – ಮಾಲಿಕೆಯಿಂದ, ಪ್ರಕಾಮ– ಅತ್ಯಂತವಾಗಿ, ಅಭಿರಾಮ–ಮನೋಹರವಾದ, ಸ್ತನ ದ್ವಂದ್ವ–ಎರಡು ಮೊಲೆಗಳ, ಮಧ್ಯೇ–ಮಧ್ಯಪ್ರದೇಶ ವುಳ್ಳ ಸ್ತ್ರೀಯೆ, ಹರಿದ್ರಾರಜೋಮಾಕ್ಷಿಕಾಭ್ಯಾಂ : ಹರಿದ್ರಾರಜಃ–ಅರಿಸಿನದ ಪುಡಿ, ಮಾಕ್ಷಿಕಾಭ್ಯಾಂ–ಜೇನುತುಪ್ಪ ಇವುಗಳೊಡನೆ, ವಿಮಿಶ್ರಃ–ಬೆರೆದ. ಶಿವಾಯಾಃ–ನೆಲ್ಲಿಯ (ಅಥವಾ) ಅಳಲೇಕಾಯಿಯ, ಕಷಾಯಃ–ಕಷಾಯ ವು, ಪ್ರಮೇಹಾಪಹಾರೀ–ಪ್ರಮೇಹಜಾಡ್ಯವನ್ನು ನಾಶಮಾಡುತಲಿದೆ.

### ಪ್ರಾಕೃತಶ್ಲೋಕ.

ಪದುಮಪೆಣಮಣುಂಣವಿಳೊಅಣೆಸಸಿಸಹಾಯಮಣೊಹರಜಂವಣೆ ।
ಜಯಇಮೆಹಅಣಿಅಮಆರಓಮಹುಜುಓವಹರೀಹರಿಣಿಪಿಯೆ ॥ ಛಾಯಾ ॥
ಪದ್ಮಪರ್ಣಮನೋಜ್ಞವಿಲೋಚನೇ ಶಶಿಸಹಾಯಮನೋಹರಯೌವನೇ ।
ಜಯತಿಮೇಹಗಣಂ ಅಮೃತಾರಸಃ ಮಧುಯುತಇವಹರಿರ್ಹರಿಣಂಪ್ರಿಯೇ ॥ ೧೬೦ ॥

ಅಮೃತವಳ್ಳೀ ಕಷಾಯ

ಪದ್ಮಪರ್ಣಮನೋಜ್ಞವಿಲೋಚನೇ: ಪದ್ಮಪರ್ಣ–ಕಮಲದಳದಂತೆ, ಮನೋಜ್ಞ–ಮನೋಹರವಾದ, ವಿಲೋಚನೇ–ನೇತ್ರ ಗಳುಳ್ಳವಳಾಗಿಯೂ, ಶಶಿಸಹಾಯಮನೋಹರಯೌ ವನೇ : ಶಶಿ–ಚಂದ್ರನಿಗೆ, ಸಹಾಯ – ಸಹಾಯಭೂತ ವಾದ, (ಮತ್ತು) ಮನೋಹರ–ರಮ್ಯವಾದ, ಯೌವ ನೇ–ಯೌವನವುಳ್ಳವಳಾಗಿಯೂ ಇರುವ ಎಲೇ ಸ್ತ್ರೀಯೇ, ಮಧುಯುತಃ–

ಜೇನುತುಪ್ಪದೊಡನೆ ಕೂಡಿದ, ಅಮೃತಾರಸಃ—ಅಮೃತವಳ್ಳೀಕಷಾಯವು, ಮೇಹಗಣಂ—ಮೇಹಜಾಡ್ಯಗಳಗುಂಪನ್ನು, ಹರಿಃ—ಸಿಂಹವು, ಹರಿಣಮಿವ—ಜಿಂಕೆಯಂತೆ, ಜಯತಿ—ಜಯಿಸುತಲಿದೆ.

ಇಲ್ಲಿ ಆಲಂಬನಗುಣವಾದ ಯೌವನವೂ, ತಟಸ್ಥನಾದ ಚಂದ್ರನೂ ಉದ್ದೀಪನವಿಭಾವವಾದಕಾರಣ ಮನ್ಮಥೋದ್ದೀಪನ ವಿಷಯದಲ್ಲಿ, ಒಂದ ಕ್ಕೊಂದು ಸಹಾಯವಾಗಬಹುದು. ಈ ಮೇಹರೋಗದ ವಿಷಯದಲ್ಲಿ ಪ್ರಕ್ಷಿಪ್ತ.

ಶ್ಲೋ॥ ಸಮಧುಚ್ಛಿನ್ನಾಸ್ವರಸಂ ನಾನಾಮೇಹನಿವಾರಣಂ ।
ವದಂತಿಭಿಷಜಸ್ಸರ್ವೇ ಶರದಿಂದುನಿಭಾನನೇ ॥

---

## ಅಥ ವಾತರಕ್ತಚಿಕಿತ್ಸಾ.

ರತಿಕೇಳಿಕಲಾಕುಶಲೇವಿಲಸದ್ವಲಯೇ ಮಲಯೇನಸಮಾನಕುಚೇ ।
ಅಮೃತವ್ರತತೀರುಬುತೈಲವತೀ ದಳಯೇದನಿಲಾಸ್ರಮುದಾರತರಂ ॥೧೬೧॥

ರತಿಕೇಳಿಕಲಾಕುಶಲೇ: ರತಿ—ಸಂಭೋಗ, ಕೇಳಿ— ಶೃಂಗಾರಚೇಷ್ಟೆ ಇವುಗಳಿಗೆ, ಕಲಾ—ಅನುಕೂಲವಾದ ಕಾಲವನ್ನು ತಿಳಿ

ಹರಳೆಣ್ಣೆಯೊಡನೆ ಕೂಡಿದ ಅಮೃತವಳ್ಳಿ ಸ್ವರಸ

ಯತಕ್ಕ ವಿಷಯದಲ್ಲಿ, ಕುಶಲೇ — ಚತುರಳಾಗಿಯೂ, ಮಲಯೇನ—ಮಲಯಪರ್ವತದೊಡನೆ, ಸಮಾನಕುಚೇ—ಸದೃಶವಾದ ಸ್ತನಗಳುಳ್ಳವಳಾಗಿಯೂ, (ಎಂದರೆ ಚಂದನಾದಿಗಳಿಂದ ಅತ್ಯಂತವಾಸನಾ ವಿಶಿಷ್ಟಗಳಾದ ಮೊಲೆಗಳುಳ್ಳವಳೇ ಎಂಬರ್ಥ. ವಿಲಸದ್ವಲಯೇ — ಪ್ರಕಾಶಮಾನವಾದ ಕಡಗಗಳುಳ್ಳವಳಾಗಿಯೂ ಇರುವ ಎಲೇ ಸ್ತ್ರೀಯೇ, ರುಬುತೈಲವತೀ—ಕೈಯೆಣ್ಣೆಯುಳ್ಳ, ಅಮೃತವ್ರತತೀ—ಅಮೃತವಳ್ಳಿಯು, ಉದಾರತರಂ—ಅಧಿಕವಾದ ರಕ್ತಜಾಡ್ಯವನ್ನು, ದಳಯೇತ್—ನಾಶಮಾಡೀತು.

ತಾತ್ಪರ್ಯ.—ಹರಳೆಣ್ಣೆಯೊಡನೆಕೂಡಿದ ಅಮೃತವಳ್ಳೀಸ್ವರಸವನ್ನಾಗಲಿ, ಅಮೃತವಳ್ಳೀಸ್ವರಸದಲ್ಲಿ ಹದದಿಂ ಕಾಯಿಸಲ್ಪಟ್ಟ ಹರಳೆಣ್ಣೆಯನ್ನಾಗಲಿ ಕುಡಿಯಲು ವಾತರಕ್ತಜಾಡ್ಯವು ನಾಶವಾಗುವದು.

household remedy among the natives of Bengal for dysentery, at the commencement of the attack.

Flour, made out of green plantain, dried in the sun, is used in the form of *chappatis* in certain parts of Tirhoot in cases of dyspepsia with troublesome flatulence and acidity. I have known one case in which it agreed remarkably well when even a diet of plain sago and water brought on a severe attack of colic. The *chappatis* are taken dry with a little salt." (**Assistant-Surgeon N. C. Dutt,** Durbhanga.)

"A combination of ripe plantain, tamarind and common salt is most efficacious in dysentery. I have used it in many cases both of the acute and chronic forms of the disease, and seldom failed to effect a cure. It may, in fact, be said to be a specific. It is simple, easily procurable, and may safely be administered to a child. In simple cases, a single dose is sufficient; as a rule, three or four doses are required to effect a cure. The patient should be kept quiet and placed on low diet. The dose for an adult is,—ripe plantain one ounce, the pulp of ripe tamarind half an ounce, common salt quarter of an ounce; well mixed and administered immediately. It may be given two or three times a day." (**R. A. Parker, M.D.**)

"The juice of the tender-roots contains a large quantity of tannin and is used with mucilage for checking haemorrhages from the genital and air passages. The ashes, pro-

duced by burning the plant, contain a large amount of potash salts, and are used as an antacid in acidity, heart-burn, and colic.

The tender fruit is used as a diet for patients suffering from haemoptysis and diabetes." (**J. H. Thornton, B.A., M.B.**, Monghyr.)

The juice of the bark and leaf is frequently given to children suffering from an overdose of opium. The juice of an ounce of bark, mixed with an ounce of ghee, acts as a brisk purgative." (**Surgeon J. Mc Cloghy, Poona.**)

"The juice of the root is used as an antidote to arsenical poisoning in the lower animals. Mixed with ghee and sugar and administered internally, it is said to be useful in gonorrhoea." (**J. Parker, M.D., Poona.**)

**Dr. Reginald Ashe,** the Superintendent of the Jail at Mymensingh, has lately used with much success in the treatment of diarrhoea and dysentery flour made from the plantain. .... The plantains are cut just before ripening, they are skinned with a sharp wooden knife, so as to avoid blackening, then cut into thin slices, sun-dried, pounded with a mortar and sifted through muslin. The fine powder or flour should be stored in air-tight glass bottles. The issue is 2oz. for each meal cooked in a brass vessel with a little water. Butter-milk can afterwards be added. The taste of the plantain powder is slightly astringent, but fruity and palatable. There is no doubt of the high nutritive

value of the plantain. The flour is said to be easily digested. It is well worth trying for patients with chronic bowel complaint who cannot digest milk.—*Indian Medical Gazette, July 1900.*

"Plantain leaf is the cleanest and nicest dressing for a blistered surface that I know, and is also useful in covering other dressings. A piece of plantain leaf introduced into the helmet on a hot day forms an effectual protection from the sun's rays, without appreciably adding to the weight of the head-dress." (**H. De Tatham,** *Watt's Dictionary.*)

The gum obtained from the unripe plantain mixed with rice water is used in diarrhoea. In the Punjab, the sap of the fresh stem is largely used in nervous affections, *viz.*, hysteria, epilepsy, etc. (**B. D. Basu.**) The ashes of the stem are useful in (intestinal worms).

---

## ಆದಿತ್ಯಘುಟಿಕಾರಸವು.

ವಚಾವಿಶ್ವಾಜಾಜೀಮರಿಚಗರಬಾಹ್ಲೀಕದಹನ
ತ್ವಚಾಂ ಕಾರ್ಯಾವಟ್ಯಶ್ಚಣಕತುಲಿತಾಮಾರ್ಕವರಸೈಃ ।
ಯಥಾಭಾಸೋಭಾಸ್ವಸ್ತಿಮಿರನಿಕರಂ ಕಾಮಿನಿ ತಥಾ
ಹರಂತ್ಯೇತಾಶ್ಶೂಲಾನ್ಯನಿಲಮನಲಗ್ಲಾನಿಮಪಿಚ ॥ ೨೧೨ ॥

ಕಾಮಿನಿ—ಎಲೇ ಸ್ತ್ರೀಯೇ! ಮಾರ್ಕವರಸೈಃ – ಲಕ್ಕೀಸೊಪ್ಪಿನ ರಸಗಳಿಂದ, ವಚಾವಿಶ್ವಾಜಾಜೀಮರಿಚಗರಬಾಹ್ಲೀಕದಹನತ್ವಚಾಂ: ವಚಾ—ಬಜೆ, ವಿಶ್ವ—ಸುಂಟಿ, ಅಜಾಜಿ—ಜೀರಿಗೆ, ಮರಿಚ—ಮೆಣಸು, ಗರ—ವತ್ಸನಾಭಿ, ಬಾಹ್ಲೀಕ—ಹಿಂಗು, ದಹನತ್ವಚಾಂ—ಚಿತ್ರಮೂಲದ ತ್ವಕ್ಕು ಇವುಗಳ, ವಟ್ಯಃ—ಗುಳಿಗೆಗಳು, ಚಣಕತುಲಿತಾಃ—ಕಡಲೆಯ ಪ್ರಮಾಣಗಳಾಗಿ,

ಕಾರ್ಯಾಃ–ಮಾಡತಕ್ಕವುಗಳು, ಏತಾಃ-ಈ ಗುಳಿಗೆಗಳು, ಭಾನೋಃ-ಸೂರ್ಯನ, ಭಾಸಃ–ಕಿರಣಗಳು, ತಿಮಿರನಿಕರಂ – ಕತ್ತಲೆಯ ಗುಂಪನ್ನು, ಯಥಾ–ಹೇಗೋ, ತಥಾ–ಹಾಗೆ, ಶೂಲಾನಿ–ಶೂಲಜಾಡ್ಯಗಳನ್ನೂ, ಅನಿಲಂ–ವಾತ ಜಾಡ್ಯವನ್ನೂ, ಅನಲಗ್ಲಾನಿಮುಪಿಚ–ವಿಷಮಾಗ್ನಿಗಳನ್ನೂ, ಹರಂತಿ–ನಾಶ ಮಾಡುತಲಿವೆ.

---

## ೮೬೯. Vitex Negundo & Vitex Trifolia.

### निर्गुण्डी; सिन्दुवार:.

**Constituents of** *Vitex Negundo*:—The leaves contain an essential oil and resin; the fruits contain an acid resin, an astringent organic acid, malic acid, an alkaloid and a colouring matter.

**Uses**:—"Sanskrit writers mention two varieties of *Nirgundi*—that with pale blue flowers is called *Sindhuvara* (**Vitex Trifolia**), and that with blue flowers is called *Nirgundi*. The properties of both are identical, but the latter is generally used in medicine. The root of V. Negundo is considered tonic, febrifuge and expectorant. The leaves are aromatic, tonic, and vermifuge. A decoction of Nirgundi leaves is given with the addition of long pepper in catarrhal fever with heaviness of head and dullness of hearing. A pillow stuffed with the leaves of Nirgundi is placed under the head for relief of headache. The juice of the leaves is said to have the property of removing foetid discharges and worms from ulcers. An oil prepared with the juice of the

leaves is applied to sinuses and scrofulous sores." (*Hindu Mat. Med.*)

**Dr. Fleming** remarks that the leaves are discutient, and are useful in dispersing swellings of joints from acute rheumatism and of the testes from suppressed gonorrhoea. The people of Mysore are in the habit of treating febrile, catarrhal and rheumatic affections by means of a vapour bath prepared with this plant.

**Roxburgh** also mentions the use of the decoction of the leaves as a bath in the puerperal state of women in India, and **Ainslie** states that the Mahomedans smoke the dried leaves for the relief of headache and catarrh. The dried fruit acts as a vermifuge. (*Pharm. Ind.*)

**Dr. Hove** (1787) states that the Europeans in Bombay call it the fomentation shrub, and that it is used in the hospitals there as a foment in contractions of the limbs occasioned by the land winds. In the Concan, the juice of the leaves with that of *Maka* (*Eclipta Alba* भृङ्गराज:) and **Tulasi** (Ocimum Sanctum तुलसी) is extracted, and *Ajwan* seeds are bruised and steeped in it, and given in doses of six mashas for rheumatism. The juice in half tola doses with ghee and black pepper is also given, and in splenic enlargement 2 tolas of the juice with 2 tolas of cow's urine is given every morning. (**Dymock.**)

V. Trifolia is highly extolled by **Bortius** (*Diseases of India*, p. 226). He speaks of it as anodyne, diuretic and

emmenagogue, and testifies to the value of fomentations, and baths prepared with "this noble herb," as he terms it, in the treatment of Beri-beri, and in the allied and obscure affection, burning of the feet in natives.

Of *V. Negundo* **Fleming** remarks (*Asiatic Researches*, Vol. XI) that its leaves have a better claim to the title of discutient than any other vegetable remedy with which he is acquainted. The mode of application followed by the natives is to put fresh leaves into an earthen pot and heat them over the fire till they are as hot as can be borne without pain; they are then applied to the affected part, and kept *in situ* by a bandage; the application is repeated three or four times a day until the swelling subsides.

---

## ವಿಲಾಸಿನೀವಲ್ಲಭರಸವು.

ಸಮಾನಭಾಗೇ ಬಲಿಶೂಲಿಬೀಜೇ ತಯೋಸ್ಸಮಾನಂ ಕನಕಸ್ಯ ಬೀಜಂ ।
ಧುತ್ತೂರತ್ತೈಲೇನವಿಮರ್ದ್ಯ ಸಮ್ಯಗ್ವಿಲಾಸಿನೀ ವಲ್ಲಭನಾಮಧೇಯಃ ॥೨೧೩॥

ಸೂತೋಭವೇದ್ವಲ್ಲಯುಗಪ್ರಮಾಣಸ್ಸಿತಾಯುತೋ ಮೇಹಸಮೂಹಹಾರೀ ।
ವೀರ್ಯಸ್ಯಬಂಧಂ ಕುರುತೇ ನರಾಣಾಂ ನಿಹಂತಿ ದರ್ಪಂ ಮೃಗಲೋಚನಾನಾಂ ॥೨೧೪॥

ಸಮಾನಭಾಗೇ—ಸಮಾಂಶಗಳಾದ, ಬಲಿಶೂಲಿಬೀಜೇ: ಬಲಿ—ಶುದ್ಧ ಗಂಧಕ, ಶೂಲಿಬೀಜೇ—ರಸಭಸ್ಮ ಇವುಗಳನ್ನೂ, ತಯೋಃ—ಆವೆರಡಕ್ಕೆ, ಸಮಾನಂ—ಸಮಾನವಾದ, (ಎಂದರೆ) ದ್ವಿಗುಣವಾದ, ಕನಕಸ್ಯ—ಉಮ್ಮತ್ತಿಯ, ಬೀಜಂ—ಬೀಜವನ್ನು, ಧುತ್ತೂರತ್ತೈಲೇನ—ಉಮ್ಮತ್ತೀತೈಲದಿಂದ, ಸಮ್ಯಕ್—ಚನ್ನಾಗಿ, ವಿಮರ್ದ್ಯ—ಅರೆದು, ಕೃತಃ—ಮಾಡಲ್ಪಟ್ಟ, ವಿಲಾಸಿನೀ ವಲ್ಲಭನಾಮಧೇಯಃ—ವಿಲಾಸಿನೀವಲ್ಲಭೆಯೆಂಬ ಹೆಸರುಳ್ಳ, ವಲ್ಲಯುಗ

ಪ್ರಮಾಣಃ–ಆರು ಗುಲಗಂಜಿ ತೂಕವುಳ್ಳ, ಸಿತಾಯುತಃ–ಸಕ್ಕರೆಯೊಡನೆ ಕೂಡಿದ, ಸೂತಃ – ಈ ರಸೌಷಧವು, ಮೇಹಸಮೂಹಹಾರೀ – ಮೇಹ ಜಾಡ್ಯಗಳ ಸಮೂಹವನ್ನು ನಾಶಮಾಡುತಲಿದೆ. ನರಾಣಾಂ – ಮನುಷ್ಯ ರಿಗೆ, ವೀರ್ಯಸ್ಯಬಂಧಂ–ವೀರ್ಯಸ್ತಂಭವನ್ನು, ಕುರುತೇ–ಮಾಡುತಲಿದೆ. ಮೃಗ ಲೋಚನಾನಾಂ–ಸ್ತ್ರೀಯರ, ದರ್ಪಂ–ಗರ್ವವನ್ನು, ನಿಹಂತಿ–ನಾಶಮಾಡು ತಲಿದೆ.

ತಾತ್ಪರ್ಯ.—ಈ ಔಷಧವನ್ನು ಸೇವಿಸಿದ ಪುರುಷರಿಗೆ ವೀರ್ಯ ಸ್ತಂಭವಾಗುವುದರಿಂದ ಇವರೊಡನೆ ಸಂಭೋಗಿಸಿದ ಸ್ತ್ರೀಯರು ಸೋತು ಹೋಗುವರು.

—ಇತಿ ರಸಪ್ರಕರಣಂ—

---

ಶೂಲೇಹಿಂಗುಘೃತಾನ್ವಿತಂ ಮಧುಯುತಾ ಕೃಷ್ಣಾಪುರಾಣಜ್ವರೇ
ವಾತೇಸಾಜ್ಯರಸೋನಕಃಕಸನಕೇ ಕ್ಷೌದ್ರಾನ್ವಿತಂ ತ್ರ್ಯೂಷಣಂ ।
ಶೀತೇವ್ಯಾಳಲತಾದಳಂ ಸಮರಿಚಂ ಮೇಹೇವರಾಸೋಪಲಾ
ದೋಷಾಣಾಂತ್ರಿತಯೇನುಪಾನಮುಚಿತಂ ಸಕ್ಷೌದ್ರಮಾರ್ದ್ರೋದಕಂ
॥ ೨೧೫ ॥

ಶೂಲೇ–ಶೂಲಜಾಡ್ಯದಲ್ಲಿ, ಘೃತಾನ್ವಿತಂ–ತುಪ್ಪದೊಡನೆ ಕೂಡಿದ, ಹಿಂಗು–ಇಂಗು, ಪುರಾಣಜ್ವರೇ–ಹಳೇಜ್ವರದಲ್ಲಿ, ಮಧುಯುತಾ– ಜೇನು ತುಪ್ಪದೊಡನೆ ಸೇರಿದ, ಕೃಷ್ಣಾ–ಹಿಪ್ಪಲಿಯು, ವಾತೇ–ವಾತಜಾಡ್ಯದಲ್ಲಿ, ಸಾಜ್ಯರಸೋನಕಃ–ತುಪ್ಪದೊಡನೆ ಕೂಡಿದ ಬೆಳ್ಳುಳ್ಳಿಯು, ಕಸನಕೇ–ಕಾಸ ಜಾಡ್ಯದಲ್ಲಿ, ಕ್ಷೌದ್ರಾನ್ವಿತಂ–ಜೇನುತುಪ್ಪದೊಡನೆ ಕೂಡಿದ, ತ್ರ್ಯೂಷಣಂ– ತ್ರಿಕಟುಕಚೂರ್ಣವು, ಶೀತೇ–ಶೀತಜಾಡ್ಯದಲ್ಲಿ, ಸಮರಿಚಂ-ಮೆಣಸಿನೊಡನೆ ಕೂಡಿದ, ವ್ಯಾಳಲತಾದಳಂ– ವೀಳ್ಯದೆಲೆಯು, ಮೇಹೇ– ಪ್ರಮೇಹಜಾಡ್ಯ ದಲ್ಲಿ, ಸೋಪಲಾ – ಕಲ್ಲುಸಕ್ಕರೆಯೊಡನೆ ಕೂಡಿದ, ವರಾ – ತ್ರಿಫಲೆಯ ಚೂರ್ಣವು, ದೋಷಾಣಾಂತ್ರಿತಯೇ–ಸನ್ನಿಪಾತದಲ್ಲಿ, ಸಕ್ಷೌದ್ರಂ – ಜೇನು ತುಪ್ಪದೊಡನೆ ಕೂಡಿದ, ಆರ್ದ್ರೋದಕಂ-ಹಸೀಸುಂಟಿಯ ರಸವು, ಉಚಿತಂ- ಯೋಗ್ಯವಾದ, ಅನುಪಾನಂ–ಅನುಪಾನವು. (ಎಂದರೆ) ಆಯಾಯ ಜಾಡ್ಯ

ಗಳಲ್ಲಿ ಮೇಲೆ ಹೇಳಿದ ಆ ಔಷಧಗಳು ಹಿತಕರವಾದವುಗಳೆಂದು ತಾತ್ಪರ್ಯವು.

ಘನಪರ್ಪಟಕಂಜ್ವರೇ ಗ್ರಹಣ್ಯಾಂ ಮಥಿತಂಹೇಮವಿಷೇವಮಿಷುಲಾಜಾಃ।
ಕುಟಜೋತಿಸೃತೌವೃಷೋಸ್ರಪಿತ್ತೇಗುದಕೀಲೇಷ್ವನಲಃಕ್ರಿಮೌಕ್ರಿಮಿಘ್ನಃ
॥ ೨೧೬ ॥

ಜ್ವರೇ—ಜ್ವರದಲ್ಲಿ, ಘನಪರ್ಪಟಕಂ: ಘನ – ಕೊನ್ನಾರೆಗೆಡ್ಡೆ, ಪರ್ಪಟಕಂ—ಪರ್ಪಾಷ್ಟಕವು, ಗ್ರಹಣ್ಯಾಂ—ಗ್ರಹಣೀಜಾಡ್ಯದಲ್ಲಿ, ಮಥಿತಂ—ಮಜ್ಜಿಗೆಯು, ವಿಷೇ—ಕೈಮುಸಕಿನಲ್ಲಿ, ಹೇಮ—ಸುವರ್ಣಭಸ್ಮವು, ವಮಿಷು—ವಮನಜಾಡ್ಯದಲ್ಲಿ, ಲಾಜಾಃ—ಅರಳುಗಳು, ಅತಿಸೃತೌ—ಅತಿಸಾರದಲ್ಲಿ, ಕುಟಜಃ—ಕೊಡಸಿಗೆಬೀಜ, ಅಸ್ರಪಿತ್ತೇ—ರಕ್ತಪಿತ್ತಜಾಡ್ಯದಲ್ಲಿ, ವೃಷಃ—ಆಡುಸೋಗೆ, ಗುದಕೀಲೇಷು—ಮೂಲವ್ಯಾಧಿಗಳಲ್ಲಿ, ಅನಲಃ—ಚಿತ್ರಮೂಲವು, ಕ್ರಿಮೌ—ಕ್ರಿಮಿಜಾಡ್ಯದಲ್ಲಿ, ಕ್ರಿಮಿಘ್ನಂ—ವಾಯುವಿಳಂಗವು, ಹಿತವಾದದ್ದೆಂದು ಎಲ್ಲಾ ಕಡೆಯಲ್ಲಿಯೂ ಅರ್ಥವು.

ನಾರಾಯಣಂಭಜತರೇ ಜಠರೇಣಯುಕ್ತಾಃ
ನಾರಾಯಣಂ ಭಜತರೇ ಪವನೇನಯುಕ್ತಾಃ।
ನಾರಾಯಣಂ ಭಜತರೇ ಭವಭೀತಿಭೀತಾಃ
ನಾರಾಯಣಾತ್ಪರತರಂ ನಹಿಕಿಂಚಿದಸ್ತಿ ॥ ೨೧೭ ॥

ರೇ—ಎಲೈ, ಜಠರೇಣ— ಉದರಜಾಡ್ಯದೊಡನೆ, ಯುಕ್ತಾಃ—ಕೂಡಿದ ನೀವು, ನಾರಾಯಣಂ—ವಿಷ್ಣುವನ್ನು, ಭಜತ – ಸೇವಿಸಿರಿ. ಪವನೇನ—ವಾತಜಾಡ್ಯದೊಡನೆ, ಯುಕ್ತಾಃ—ಕೂಡಿದ ನೀವು, ನಾರಾಯಣಂ—ವಿಷ್ಣುವನ್ನು, ಭಜತ—ಸೇವಿಸಿರಿ. ಭವಭೀತಿಭೀತಾಃ—ಸಂಸಾರಭಯದಿಂದ ಹೆದರಿದ ನೀವು, ನಾರಾಯಣಂ—ವಿಷ್ಣುವನ್ನು, ಭಜತ—ಸೇವಿಸಿರಿ. ನಾರಾಯಣಾತ್—ವಿಷ್ಣುವಿಗಿಂತಲೂ, ಪರತರಂ—ಅತ್ಯಂತ ಶ್ರೇಷ್ಠವಾದ, ಕಿಂಚಿತ್—ಯಾವ ವಸ್ತುವೂ, ನಾಸ್ತಿಹಿ—ಇಲ್ಲವೇಯಿಲ್ಲ.

ಕೆಲವರು ಉದರಜಾಡ್ಯದಲ್ಲಿ ನಾರಾಯಣಶಬ್ದಕ್ಕೆ ನಾರಾಯಣಚೂರ್ಣವೆಂದೂ, ವಾತಜಾಡ್ಯದಲ್ಲಿ ನಾರಾಯಣ ಶಬ್ದಕ್ಕೆ ನಾರಾಯಣತೈಲವೆಂದೂ, ಅರ್ಥವಂ ಹೇಳುತ್ತಾರೆ; ಈ ಅರ್ಥದಲ್ಲಿ 'ನಾರಾಯಣಾ

ತ್ವರತರಂ ನಹಿಕಿಂಚಿದಸ್ತಿ' ಎಂದ ಮಾತಿಗೆ ಅಸಂಗತತ್ವವುಂಟಾಗುತಲಿದೆ. (ಹೇಗೆಂದರೆ) ಗ್ರಂಥಕಾರನಿಂದ ಮತ್ತೊಂದು ಗ್ರಂಥದಲ್ಲಿ ಹೇಳಲ್ಪಟ್ಟಿರುವ ಔಷಧಗಳನ್ನು ತೆಗೆದುಕೊಳ್ಳಬಹುದೆಂದು. ಹಿಂದೆ ಯಾವ ಚಿಕಿತ್ಸೆಯಲ್ಲೂ ಹೇಳಲ್ಪಡಲಿಲ್ಲ. ಜ್ವರಚಿಕಿತ್ಸೆಯಲ್ಲಿ 'ವಿಷ್ಣುನಾಮಸ್ನಾಂಸಹಸ್ರಂ' ಎಂಬುದಾಗಿಯೂ ಅತಿಸಾರಚಿಕಿತ್ಸೆಯಲ್ಲಿ 'ಸ್ಮರತುಪ್ರಸಹ್ಯಗೋವಿಂದ ಗೋಪಾಲ ಗದಾಧರೇತಿ' ಎಂಬುದಾಗಿಯೂ, ಹೇಳಲ್ಪಟ್ಟಿದೆ. ಹೀಗಿರುವಲ್ಲಿ ನಾರಾಯಣ ಶಬ್ದಕ್ಕೆ ಮತ್ತೊಂದರ್ಥವನ್ನು ಹೇಳುವದು ಸರಿಯಲ್ಲ.

ಮಹೀಶೂರ ಪುರಾವಾಸಿ ಪುಟ್ಟಸಾಮ್ಯಯ್ಯ ಸೂರಿಣಾ ।
ಸಮಾಪ್ತಿಂಗಮಿತಾ ಟೀಕಾ ವೈದ್ಯಜೀವನದೀಪಿಕಾ ॥
ಸಕಲಸುಗುಣಪೂರ್ಣಾಃ ಸಾದರಂಪ್ರೇಕ್ಷ್ಯಸಂತಃ
ಕೃತಿಮಪಿಗುಣಲೇಶಾ ನಾಸ್ಪದಂ ಮಾಮಕೀನಾಂ ।
ಸ್ವಸುಗುಣಗಣಗಂಧೈರ್ವಾಸಿತಾಂತಾಂ ವಿಧಾಯ
ಕ್ಷಪಿತಪರಮದೋಷಾಮಾಶು ಯೂಯಂ ವಿಧಧ್ವಂ ॥

---

["ಈ ಶ್ಲೋಕದಲ್ಲಿ ಹೇಳಿರುವ 'ನಾರಾಯಣ' ಶಬ್ದಕ್ಕೆ ನಾರಾಯಣ ತೈಲ; ಚೂರ್ಣಗಳೆಂದು ಅರ್ಥವಾಗುವುದಿಲ್ಲ." ಎಂದು ಟೀಕಾಕಾರರು ಸಕಾರಣವಾಗಿ ಬರೆದಿರುವರಾದರೂ ಭಿನ್ನಾಭಿಪ್ರಾಯ ಪಡುವವರಿಗಾದರೂ ಉಪಯೋಗಕ್ಕೆ ಬರಲೆಂದು, ಆ ನಾರಾಯಣ ತೈಲ ಮತ್ತು ಚೂರ್ಣಗಳ ರಚನಾಕ್ರಮವನ್ನು ಕೆಳಗೆ ಕೊಟ್ಟಿರುವೆವು.]

## ನಾರಾಯಣಚೂರ್ಣವು.

ಕರ್ಷಮಾತ್ರಾ ಭವೇತ್ಕೃಷ್ಣಾ ತ್ರಿವೃತಾಸ್ಯಾತ್ಪಲಾನ್ವಿತಾ ।
ಖಂಡಾಪಲಂಚ ವಿಜ್ಞೇಯಾ ಚೂರ್ಣಮೇತತ್ಪ್ರಕಾರಯೇತ್ ॥
ಕರ್ಷೋನ್ಮಿತಂ ಲಿಹೇದೇತತ್ ಕ್ಷೌದ್ರೇಣಾಧ್ಮಾನನಾಶನಂ ।
ಗಾಢವಿಟ್ಕೋದರ ಕಫಾನ್ ಪಿತ್ತಶೂಲಂಚ ನಾಶಯೇತ್ ॥
(ಶಾರ್ಙ್ಗಧರ)

ಹಿಪ್ಪಲಿ ೧ ತೊಲ, ಲಾಲ್ತಿಗುಡು ೪ ತೊಲ ಮತ್ತು ಸಕ್ಕರೆ ೪ ತೊಲ ಇವುಗಳ ಚೂರ್ಣವನ್ನು ಒಟ್ಟಿಗೆ ಸೇರಿಸಿ, ಒಂದು ತೊಲ ಪ್ರಮಾಣ

ಜೇನುತುಪ್ಪದೊಂದಿಗೆ ಸೇವಿಸುವುದು. ಇದರಿಂದ ಹೊಟ್ಟೆಯುಬ್ಬರ, ಮಲಬದ್ಧತೆ, ಉದರರೋಗ, ಕಫ, ಪಿತ್ತ ಮತ್ತು ಶೂಲೆ ಇವೆಲ್ಲಾ ಪರಿಹಾರವಾಗುವವು.

## ನಾರಾಯಣತೈಲವು.

ಅಶ್ವಗಂಧಾ ಬಲಾಬಿಲ್ವಂ ಪಾಟಲಾ ಬೃಹತೀದ್ವಯಂ ।
ಶ್ವದಂಷ್ಟ್ರಾತಿಬಲಾನಿಂಬಃ ಸ್ಯೋನಾಕಶ್ಚ ಪುನರ್ನವಃ ॥
ಪ್ರಸಾರಿಣೀ ಚಾಗ್ನಿಮಂಥಃ ಕುರ್ಯಾದ್ದಶಫಲಂ ಪೃಥಕ್ ।
ಚತುರ್ದ್ರೋಣೇ ಜಲೇಪಕ್ತ್ವಾ ಪಾದಶೇಷಂಶೃತಂನಯೇತ್ ॥
ತೈಲಾಢಕೇನಸಂಯೋಜ್ಯ ಶತಾವರ್ಯಾರಸಾಢಕಂ ।
ಕ್ಷಿಪೇತ್ತತ್ರಚ ಗೋಕ್ಷೀರಂ ತೈಲಾತ್ತಸ್ಮಾಚ್ಚತುರ್ಗುಣಂ ॥
ಶನೈಃ ವಿಪಾಚಯೇತ್‌ಯೇಭಿಃ ಕಲ್ಕೈರ್ದ್ವಿಪಲಿಕೈರ್ಭವೇತ್ ।
ಕುಷ್ಠೈಲಾಚಂದನಂಮೂರ್ವಾ ವಚಾಮಾಂಸೀಸಸೈಂಧವೈಃ ॥
ಅಶ್ವಗಂಧಾಬಲಾರಾಸ್ನಾ ಶತಪುಷ್ಪೇಂದ್ರದಾರುಭಿಃ ।
ಪರ್ಣೀಚತುಷ್ಟಯೇನೈವತಗರೇಣೈವ ಸಾಧಯೇತ್ ॥
ತತ್ತೈಲಂ ನಾವನೇಭ್ಯಂಗೇಪಾನೇ ಬಸ್ತೌಚಯೋಜಯೇತ್ ।
ಪಕ್ಷಾಘಾತಂ ಹನುಸ್ತಂಭಂ ಮನ್ಯಾಸ್ತಂಭಂಗಲಗ್ರಹಂ ॥
ಖಲ್ಲತ್ವಂಬಧಿರತ್ವಂಚ ಗತಿಭಂಗಂ ಕಟಿಗ್ರಹಂ ।
ಗಾತ್ರಶೋಷೇಂದ್ರಿಯಧ್ವಂಸೇ ಅಸೃಕ್ಪಿತ್ತೇಕ್ಷಯೇಜ್ವರೇ ॥
ಅಂತವೃದ್ಧಿಂ ಕುರಂಡಂಚ ದಂತರೋಗಂ ಶಿರೋಗ್ರಹಂ ।
ಪಾರ್ಶ್ವಶೂಲಂಚಪಾಂಗುಲ್ಯಂ ಬುದ್ಧಿಹಾನಿಂಚ ಗೃಧ್ರಸೀಂ ॥
ಅನ್ಯಾಂಶ್ಚ ವಿಷಮಾನ್ ವಾತಾನ್ ಜಯೇತ್ಸರ್ವಾಂಗ ಸಂಶ್ರಯಾನ್ ।
ಅಸ್ಯಪ್ರಭಾವಾದ್ವಂಧ್ಯಾಪಿನಾರೀ ಪುತ್ರಂ ಪ್ರಸೂಯತೇ ॥
ಮರ್ತ್ಯೋ ಗಜೋ ವಾ ತುರಗಃ ತೈಲಾಭ್ಯಂಗಾತ್ಸುಖೀಭವೇತ್ ।
ಯಥಾ ನಾರಾಯಣೋದೇವೋ ದುಷ್ಟದೈತ್ಯವಿನಾಶನಃ ॥
ತಥೈವಂ ವಾತರೋಗಾಣಾಂ ನಾಶನಂ ತೈಲಮುತ್ತಮಂ ।

ಅಶ್ವಗಂಧಿ, ಕಳ್ಳಂಗಳ್ಳೆ, ಬಿಲ್ವ, ಪಾದ್ರಿ, ಹೆಗ್ಗುಳ್ಳ, ನೆಲಗುಳ್ಳ, ನೆಗ್ಗಲು, ಬೋಳಂಗಳ್ಳೆ, ಬೇವು, ಹೆಮ್ಮರ, ಕೊಮ್ಮೆ, ಗೋರಂಟೆ, ನರು

ವಲು, ಈ ಹದಿಮೂರು ಮೂಲಿಕೆಗಳನ್ನು ಹತ್ತು ಹತ್ತು ತೊಲೆಯಂತೆ ತೆಗೆದುಕೊಂಡು ಸ್ವಲ್ಪ ಜಜ್ಜಿ ೪ ದ್ರೋಣ ನೀರಿನಲ್ಲಿ ಹಾಕಿ ಚತುರ್ಥಾಂಶ ಉಳಿಯುವ ಪರ್ಯಂತರವೂ ಕಾಯಿಸಿ, ಅನಂತರ ಶೋಧಿಸಬೇಕು. ಅದಕ್ಕೆ ಒಳ್ಳೆಣ್ಣೆ ಒಂದು ಆಢಕ ಪ್ರಮಾಣ ಬೆರೆಸಬೇಕು. ಚೆಂಗಲ ಕೋಷ್ಠ, ಯಾಲಕ್ಕಿ, ಬಿಳೀಚಂದನ, ಕೊರಟಿಗೆ, ಬಜೆ, ಜಟಾಮಾಂಸಿ, ಸೈಂಧವ, ಅಶ್ವಗಂಧಿ, ಕಲ್ಪಂಗಳ್ಳಿ, ರಾಶ್ಮೆ, ಬಡೀಶೋಪು, ಹಾವುಮೆಕ್ಕೆ, ದೇವದಾರು, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಕಾಡು ಹೆಸರು. ಕಾಡು ದ್ದು ಮತ್ತು ಗ್ರಂಥಿಕ ತಗರ, ಈ ಹದಿನೇಳು ವಸ್ತುಗಳನ್ನು ಎರಡೆ ರಡು ಪಲ ತೆಗೆದುಕೊಂಡು ಕಲ್ಕವನ್ನು ಮಾಡಿ ಆ ತೈಲದಲ್ಲಿ ಹಾಕಿ, ಮಂದಾಗ್ನಿಯಿಂದ ತೈಲಾವಶೇಷದವರೆವಿಗೂ ಕಾಯಿಸಬೇಕು. ಅನಂತರ ಶೋಧಿಸಿಕೊಂಡು ತೆಗೆದುಕೊಳ್ಳಬೇಕು. ಇದೇ ನಾರಾಯಣತೈಲವು. ಈ ತೈಲವನ್ನು ಮೂಗಿಗೆ ಹಾಕುವುದಕ್ಕೂ, ಅಭ್ಯಂಗನಕ್ಕೂ, ಪಾನಕ್ಕೂ, ಬಸ್ತಿಕರ್ಮಕ್ಕೂ ಸಹ ಉಪಯೋಗಿಸಬಹುದು. ಇದರಿಂದ ಪಕ್ಷಾಘಾತ, ಹನುಸ್ತಂಭ, ಮನ್ಯಾಸ್ತಂಭ, ಗಲಗ್ರಹವಾಯು, ಖಲ್ಲೀವಾಯು (ಇದು ತೊಡೆ, ಮೊಣಕಾಲು, ಪಾದ ಇವುಗಳಲ್ಲಿ ಉಂಟಾಗುವುದು), ಬಧಿರತ್ವ ವನ್ನು ಉಂಟುಮಾಡುವ ವಾಯು, ಗತಿಭಂಗವಾಯು, ಕಟಿಗ್ರಹ. ಹಸ್ತ ಪಾದಾದಿಗಳಲ್ಲಿ ಶೋಷಣವನ್ನುಂಟುಮಾಡುವ ವಾಯು, ಚಕ್ಷುರಾದಿ ಇಂದ್ರಿಯಗಳನ್ನು ನಾಶಪಡಿಸುವ ವಾಯು, ರಕ್ತವಿಕಾರ, ಧಾತುಕ್ಷಯ, ಜ್ವರ, ಕ್ಷಯ, ಆಂತ್ರವೃದ್ಧಿ, ಕುರಂಡವಾಯು, ದಂತರೋಗ, ಮಸ್ತಕವಾ ಯು, ಪಾರ್ಶ್ವಶೂಲೆ, ಬುದ್ಧಿ ಭ್ರಂಶ, ಗೃಧ್ರಸಿ ಮುಂತಾದ ಅನೇಕ ವಾಯುಗಳು ಪರಿಹಾರವಾಗುತ್ತವೆ. ಇದಲ್ಲದೆ ವಿಷಮವಾಯು, ಮತ್ತು ಸರ್ವಾಂಗದಲ್ಲಿರತಕ್ಕ ಸಮಸ್ತ ವಾತ ವಿಕಾರಗಳೂ ಪರಿಹಾರವಾಗುವುವು. ಈ ತೈಲದ ಪ್ರಭಾವದಿಂದ ಸ್ತ್ರೀಯರಿಗೆ ಮಕ್ಕಳಾಗುತ್ತವೆ. ಈ ತೈಲ ಲೇಪದಿಂದ ಮನುಷ್ಯರಿಗೆ ಸುಖವುಂಟಾಗುವುದು. ಗಜಾಶ್ವಗಳಿಗೆ ಹಚ್ಚಿ ದರೂ ಸುಖವನ್ನುಂಟುಮಾಡುವುದು. ಭಗವನ್ನಾರಾಯಣನು ದುಷ್ಟ ದಾನವ ಸಮೂಹವನ್ನು ನಾಶಪಡಿಸುವಹಾಗೆ ಈ ತೈಲವು ವಾತವಿಕಾರ ವನ್ನು ಪರಿಹರಿಸುವುದರಲ್ಲಿ ಅಗ್ರಗಣ್ಯವಾದುದು.

---

ಶ್ರೀಗಣಾಧಿಪತಯೇನಮಃ.

# ರಸಗಂಧಕಪಾಷಾಣಾದಿಗಳ ಶುದ್ಧಿಯು

ಲೋಲಂಬರಾಜಕವಿಯಿಂದ ಹೇಳಲ್ಪಟ್ಟ ವೈದ್ಯಜೀವನಗ್ರಂಥದ ರಸಪ್ರಕರಣದಲ್ಲಿ ರಸಗಂಧಕ ಪಾಷಾಣಾದಿಗಳ ಉಪಯೋಗವು ಹೇಳಲ್ಪಟ್ಟಿದೆ. ಅವುಗಳ ಶುದ್ಧಿಯು ಹೇಳಲ್ಪಡಲಿಲ್ಲ. ಅವುಗಳಂ ಶುದ್ಧಿಗೊಳಿಸದೆ ಪ್ರಯೋಗಿಸಿದರೆ ಅನೇಕಾನರ್ಥಗಳು ಸಂಭವಿಸುವವೆಂದು ಯೋಚಿಸಿ, ಶಾರ್ಙ್ಗಧರ, ರಸರತ್ನಾಕರ, ಕಲ್ಯಾಣಕಾರಕ, ಮೊದಲಾದ ಗ್ರಂಥಗಳಲ್ಲಿ ಹೇಳಿರುವ ಶುದ್ಧಿಗಳನ್ನು ನೋಡಿ, ಈ ರಸಪ್ರಕರಣಕ್ಕೆ ಅನುಕೂಲವಾದ ಕೆಲವು ಪದಾರ್ಥಗಳ ಶುದ್ಧಿಗಳನ್ನೂ, ಭಸ್ಮಗಳನ್ನೂ ಈ ಕೆಳಗೆ ವಿವರಿಸುವೆನು.

## ರಸಶುದ್ಧಿಕ್ರಮವು.

ಪಾದರಸವನ್ನು ಖಲ್ವದೊಳಿಟ್ಟು ಪೂಜಿಸಿ, ಎಕ್ಕದಹಾಲು, ಕಳ್ಳೀಹಾಲು, ಜಾಪಾಳದರಸ, ಮಂಗರವಳ್ಳೀರಸ, ಸೂರಣಗೆಡ್ಡೇರಸ, ಬಲರಕ್ಕಸೀಗೆಡ್ಡೇರಸ, ಅಂಕೋಲೇರಸ, ಚಿತ್ರಮೂಲದರಸ, ಬಜೇರಸ, ಆಡಿನಮೂತ್ರ, ಎಳ್ಳೆಣ್ಣೆ, ಹುಣಸೇಸೊಪ್ಪಿನರಸ, ಸಿಂಬೇಹುಳಿ, ಲೋಳಿಸರದರಸ, ಹಸೀಸುಂಠಿಯರಸ, ನೆಲ್ಲೀಕಾಯಿಯರಸ, ಹಸೀ ಅರಿಸಿನವರಸ, ಮೂಲಂಗೀಸೊಪ್ಪಿನರಸ, ಮೊಸರು, ಜೇನುತುಪ್ಪ, ಆಕಳಹಾಲು, ಬಿಳೀಕಬ್ಬಿನರಸ, ಈ ರಸಗಳಲ್ಲಿ ಒಂದೊಂದು ರಸದಿಂದ ಒಂದೊಂದು ಜಾವ ಭಾವನೆಕೊಟ್ಟರೆ ರಸ ಶುದ್ಧವಾಗುವದು. ಈ ರಸವನ್ನು ಯಾವ ಪ್ರಯೋಗಕ್ಕಾದರೂ ಹಾಕಿಕೊಳ್ಳಬಹುದು.

## ಗಂಧಕಶೋಧನ.

ಚೊಕ್ಕಹವಳಸರೀಗಂಧಕವನ್ನು ಸಣ್ಣನಾಗಿ ಅರೆದು, ಒಂದು ಸೇರು ಗಂಧಕಕ್ಕೆ ಒಂದು ಪಾವು ಹಸುವಿನತುಪ್ಪವಂ ಹೊಯ್ದು ಕಲಸಿ

ಮುದ್ದೆಯಂ ಮಾಡಿ, ಒಂದು ಒಳ್ಳೇ ಗಡಿಗೆಯ ಅಂಡಿನಲ್ಲಿ ಸಣ್ಣಗೆ ೬-೭ ರಂಧ್ರಗಳಂಮಾಡಿ, ಈ ಗಂಧಕದ ಮುದ್ದೆಯನ್ನು ಆ ಗಡಿಗೆಯೊಳಿರಿಸಿ, ಮೇಲೊಂದು ಹರಿವಾಣವಂಮುಚ್ಚಿ, ಮತ್ತೊಂದು ಗಡಿಗೆಗೆ ಹಾಲನ್ನು ಹುಯ್ದು, ಮೊಳದುದ್ದ ಗುಳಿಯಂ ತೋಡಿ, ಆ ಗುಳಿಯಲ್ಲಿ ಹಾಲುತುಂಬಿದ ಗಡಿಗೆಯನ್ನಿಟ್ಟು, ಅದರಮೇಲೆ ಗಂಧಕದ ಗಡಿಗೆಯಂಮುಡಗಿ, ಅದರ ಮೇಲೆ ನಾಲ್ಕು ಬೆರಳು ಪ್ರಮಾಣ ಮಣ್ಣು ಹರಡಿ, ಅದರ ಮೇಲೆ ಬೆರಣೆಯಂವಟ್ಟಿ, ಉರಿಹಾಕಲು, ಆ ಗಂಧಕ ಕಾದು, ಹಾಲು ಗಡಿಗೆಗೆ ಬೀಳುವದು. ಈ ಶುದ್ಧಗಂಧಕವನ್ನು ಯಾವ ಪ್ರಯೋಗಕ್ಕಾದರೂ ಹಾಕಿಕೊಳ್ಳಬಹುದು.

## ಅಭ್ರಕಶುದ್ಧಿ.

ಅಭ್ರಕವನ್ನು ಎಳ್ಳೆಣ್ಣೆ, ಕುದುರೇಮೂತ್ರ, ಆಡಿನಮೂತ್ರ, ಆಕಳ ಹಾಲು, ಇವುಗಳಲ್ಲಿ ಕಾಸಿ ಕಾಸಿ, ಒಂದೊಂದರಲ್ಲಿ ಏಳುಬಾರಿ ಅದ್ದಲು, ಶುದ್ಧವಾಗುವದು.

## ತಾಮ್ರಶುದ್ಧಿ.

ತಾಮ್ರದ ತಗಡುಗಳಂಮಾಡಿ, ಒಂದು ದೊಡ್ಡ ಮಡಿಕೆಗೆ ಆಕಳ ಮೂತ್ರವಂತುಂಬಿ, ಆ ಮೂತ್ರಕ್ಕೆ ಈ ತಗಡುಗಳಂಹಾಕಿ, ಒಂದು ಜಾವ ಕುದಿಸಿ ಆ ಮೂತ್ರ ಶೋಷಿಸಿದರೆ ಮತ್ತೆ ಮೂತ್ರವಂ ಹುಯ್ದು, ಕುದಿಸಿದರೆ ತಾಮ್ರ ಶುದ್ಧಿಯಾಗುವದು.

## ಲೋಹಶುದ್ಧಿ.

ನಾಲ್ಕು ಸೇರು ತ್ರಿಫಲೆಯಂ ಜಜ್ಜುಗುಟ್ಟಿ, ಮೂವತ್ತೆರಡುಸೇರು ನೀರು ಹೊಯ್ದು, ನಾಲ್ಕುಸೇರು ಆಗುವಂತೆ ಕಷಾಯವಂಕಾಸಿ, ಈ ಕಷಾಯಕ್ಕೆ ಐದುಪಾವು ಲೋಹದ ತಗಡುಗಳಂಮಾಡಿ, ಕಾಸಿಕಾಸಿ, ಏಳು ಬಾರಿ ಅದ್ದಲು, ಉಕ್ಕು ಶುದ್ಧವಾಗುವದು.

## ತಾಳಕಶುದ್ಧಿ.

ತಾಳಕ ಹತ್ತುಭಾಗಕ್ಕೆ ಒಂದು ಭಾಗ ಬಿಳಿಗಾರವಂಹಾಕಿ, ಖಲ್ವದೊಳು ನುಚ್ಚುಮಾಡಿ, ನಿಂಬೇಹಣ್ಣಿನ ರಸದಿಂದಲೂ, ಅಕ್ಕೀತೊಳೆದ

ನೀರಿನಿಂದಲೂ, ತೊಳೆದು ಆಮೇಲೆ ನೀರಿನಲ್ಲಿ ಕ್ಷಾಳಿಸಿ, ನಾಲ್ಕುಪದರದ ಬಟ್ಟೆಯಲ್ಲಿ ಪೊಟ್ಟಣವಂಕಟ್ಟಿ, ಬಳಿಕ ಸುಣ್ಣಕದಡಿದನೀರು, ಅಂಬಿಲ, ಕುಂಬಳದ ಹಣ್ಣಿನರಸ, ಇವುಗಳಲ್ಲಿ ಡೋಲಾಯಂತ್ರದಲ್ಲಿ ಪಾಕವಂ ಮಾಡಿದರೆ ಶುದ್ಧಿಯಾಗುವದು.

## ಮನಶ್ಶಿಲಾಶುದ್ಧಿ.

ಮಣಿಶಿಲೆಯನ್ನು ಒಳ್ಳೇ ಗಟ್ಟಿಬಟ್ಟೆಯಲ್ಲಿ ಕಟ್ಟಿ, ಆಡಿನಮೂತ್ರ ದಲ್ಲಿ ಮೂರುಜಾವ ಡೋಲಾಯಂತ್ರದಲ್ಲಿ ಪಾಕವಂಮಾಡಿ ತೆಗೆದು. ಮತ್ತೆ ಆಡಿನತುಪ್ಪದಲ್ಲಿ ಏಳುಬಾರಿ ಬೇರೆಬೇರೆ ಭಾವನೆಯಂ ಕೊಡಲು. ಮಣಿ ಶಿಲೆ ಶುದ್ಧಿಯಾಗುವದು.

## ಕಪ್ಪರೀಶುದ್ಧಿ.

ನರಮೂತ್ರ, ಗೋಮೂತ್ರ, ಅಶ್ವಮೂತ್ರ, ಇವುಗಳಲ್ಲಿ ಕಪ್ಪರೀ ತುತ್ಥವಂ ಪ್ರತ್ಯೇಕ ಏಳೇಳುಭಾರಿ ಡೋಲಾಯಂತ್ರದಲ್ಲಿ ಅದ್ದಲು ಕಪ್ಪರೀ ತುತ್ಥ ಶುದ್ಧಿಯಾಗುವದು.

## ಮೈಲತುತ್ತಶುದ್ಧಿ.

ಬೆಕ್ಕಿನವಿಷ್ಟಿ, ಪಾರಿವಾಣದವಿಷ್ಟಿ ಇವುಗಳಲ್ಲಿ ತುತ್ತವಂಕಲಸಿ, ತುತ್ತದ ಹತ್ತುಭಾಗಕ್ಕೆ ಒಂದು ಭಾಗ ಬಿಳಿಗಾರಹಾಕಿ ಕಲಸಿ, ಒಂದು ಹೊಸ ಮುಚ್ಚಳದಲ್ಲಿ ಮಡಗಿ ಮೇಲೊಂದು ಮುಚ್ಚಳವಂ ಕೌಚಿ, ಕಪ್ಪಟ ಚೀರುಮಾಡಿ, ಒಣಗಿಸಿ, ಐದು ಬೆರಣಿಯಲ್ಲಿ ಪುಟವಿಡಲು ತುತ್ತ ಶುದ್ಧಿ ಯಾಗುವದು.

## ವಿಮಳೆಶುದ್ಧಿ.

ಬಾಳೇಗೆಡ್ಡೆರಸ, ವಾಟೇಹುಳಿರಸ, ಕೊತ್ತುಂಬರೀಕಷಾಯ. ಎಮ್ಮೆ ಮೂತ್ರ, ಇವುಗಳಲ್ಲಿ, ವಿಮಳೆಯನ್ನು ಡೋಲಾಯಂತ್ರದಲ್ಲಿ ಪ್ರತ್ಯೇಕ ವಾಗಿ ಮೂರುಮೂರುಸಾರಿ ನಾಲ್ಕುನಾಲ್ಕು ಜಾವ ಬೇಯಿಸಲು ವಿಮಳೆ ಶುದ್ಧಿಯಾಗುವದು.

## ಮಾಕ್ಷಿಕಶುದ್ಧಿ.

ಮಾಕ್ಷಿಕವನ್ನು, ನರಮೂತ್ರ, ಗೌಲದಮರದಕಷಾಯ, ವಾಟೀ ಹುಳಿಯರಸ, ಬಿಳಿಗಾರದನೀರು, ತ್ರಿಕಟುಕ ಕಷಾಯ, ಇವುಗಳಲ್ಲಿ ಪ್ರತ್ಯೇಕ ಒಂದೊಂದುದಿನ ಡೋಲಾಯಂತ್ರದಲ್ಲಿ ಪಾಕವಂಮಾಡಿ, ಆಮೇಲೆ ಸೂರಣಗೆಡ್ಡೇರಸದಲ್ಲಿ ಒಂದು ದಿನ, ಬಾಳೇಗೆಡ್ಡೇರಸದಲ್ಲಿ ಒಂದುದಿನ, ಡೋಲಾಯಂತ್ರದಲ್ಲಿಯೇ ಪಾಕವಂಮಾಡಿ, ಖಲ್ವದಲ್ಲಿಟ್ಟು, ತುಪ್ಪದಿಂ ಮರ್ದಿಸಿ, ಔಡಲ ಎಣ್ಣೆಯಲ್ಲಿ ಕಲಸಿ, ಸ್ವಲ್ಪ ಪುಟವಂಕೊಡಲು ಮಾಕ್ಷಿಕಶುದ್ಧಿಯಾಗುವದು.

## ಇಂಗಲೀಕಶುದ್ಧಿ.

ಇಂಗಲೀಕವಂ ಎಮ್ಮೇಹಾಲಲ್ಲಿ ಕಲಸಿ, ಏಳುಭಾರಿ ಭಾವನೆಯಂ ಕೊಟ್ಟು, ಮಾವಿನರಸದಲ್ಲಿ ಏಳುಭಾರಿ ಭಾವನೆಯಂಕೊಟ್ಟು, ಬೇಲದ ರಸದಲ್ಲಿ ಏಳುಭಾರಿ ಭಾವನೆಯಂ ಕೊಡಲು, ಇಂಗಲೀಕ ಶುದ್ಧಿಯಾಗುವದು.

## ಜಾಪಾಳಶೋಧನೆ.

ಒಂದು ಮಡಿಕೆಯಲ್ಲಿ ಎಮ್ಮೇಸಗಣಿಯನ್ನು ನೀರಿನಿಂದ ಕದಡಿ, ಜಾಪಾಳದಸಿಪ್ಪೆ ತೆಗೆದು, ಬೇಳೆಯಂಮಾಡಿ, ಒಳಗಣ ಮೊಳೆಯಂ ತೆಗೆದು, ಗಟ್ಟಿಬಟ್ಟೆಯಲ್ಲಿ ಪೊಟ್ಟಣವಂ ಕಟ್ಟಿ, ಆ ಸಗಣಿಗೆ ಇಳೀಬಿಟ್ಟು, ಡೋಲಾಯಂತ್ರದಲ್ಲಿ ಒಂದುಜಾವ ಪಾಕವಂಮಾಡಿ, ಆ ಬೇಳೆಯನ್ನು ಹಾಲು ತುಪ್ಪಗಳಿಂದ ಪ್ರತ್ಯೇಕ ಹುರಿದರೆ ಜಾಪಾಳವು ಚೆನ್ನಾಗಿ ಶುದ್ಧವಾಗುವದು.

## ಬಿಳಿಗಾರಶುದ್ಧಿ.

ಬಿಳಿಗಾರವನ್ನು ಬಟ್ಟೆಯಲ್ಲಿ ಪೊಟ್ಟಣವಂಕಟ್ಟಿ, ಬಿಳೀಹೂಲೀರಸದಲ್ಲಿ ಆ ಬಟ್ಟೇಗಂಟನ್ನು ಇಳೀಬಿಟ್ಟು, ಒಂದುಗಳಿಗೆ ಡೋಲಾಯಂತ್ರದಲ್ಲಿ ಪಾಕವಂಮಾಡಲು ಶುದ್ಧಿಯಾಗುವದು. ಅದೇಪ್ರಕಾರ ನಾಲ್ಕು ಜಾವ

ಡೋಲಾಯಂತ್ರದಲ್ಲಿ ಮೃದ್ವಗ್ನಿಯಿಂದ ಅರ್ಧಿವರೆ ಅದುಕರಗಿ ಮಡಿಕೆಯ ಅಂಡಿಗೆ ಇಳಿದು ಚೆನ್ನಾಗಿ ಶುದ್ಧಿಯಾಗುವದು.

## ವತ್ಸನಾಭಿಶುದ್ಧಿ.

ಒಂದು ಮುಚ್ಚಳಕ್ಕೆ ಗೋಮೂತ್ರವಂ ಹೊಯ್ದು, ಅದರಲ್ಲಿ ವತ್ಸನಾಭಿಯಂ ನೆನೆಯಲಿಟ್ಟು, ಬಿಸಿಲಲ್ಲಿರಿಸಿದ್ದು ಮೂರುದಿನದಮೇಲೆ ಆ ಮೂತ್ರವಂ ಬಸಿದು, ಮತ್ತೆ ಹೊಸಮೂತ್ರ ಹೊಯ್ದು, ಮೂರುದಿನ ಬಿಸಿಲಲ್ಲಿರಿಸಿದ್ದು ತೆಗೆದರೆ ವತ್ಸನಾಭಿ ಶುದ್ಧಿಯಾಗುವದು.

## ಶಿಲಾಜತುಶುದ್ಧಿ.

ಶಿಲಾಜತುವಂ ಚೂರ್ಣಿಸಿ, ಆಕಳ ಹಾಲಲ್ಲಿ ಕಲಸಿ, ಲೋಹಪಾತ್ರೆಯಲ್ಲಿ ಹಾಕಿ, ಹಾಲಲ್ಲಿ ಒಂದುದಿನ ಭಾವನೆಯಂ ಕೊಟ್ಟು, ಆಮೇಲೆ ಗರುಗದ ರಸದಲ್ಲಿ ಒಂದು ಭಾವನೆಯಂ ಕೊಡಲು, ಶಿಲಾಜತು ಶುದ್ಧಿಯಾಗುವದು.

## ಕಾಸೀಸಶುದ್ಧಿ.

ಕಾಸೀಸವನ್ನು ಒಂದುದಿನ ನಿಂಬೇಹುಳಿಯಲ್ಲಿ ಕಲಸಿ, ಮತ್ತು ನಿಂಬೇ ಹುಳಿಯಲ್ಲಿ ಭಾವನೆಯಂ ಕೊಡಲು ಕಾಸೀಸ ಶುದ್ಧಿಯಾಗುವದು.

## ರಸಭಸ್ಮ.

ಪಾದರಸವನ್ನು ಭಂಗೀಸೊಪ್ಪಿನ ರಸದಲ್ಲಿ ಮೂರುಭಾರಿ ಮರ್ದಿಸಿ, ಲೋಹಪಾತ್ರೆಯಲ್ಲಿರಿಸಿ, ಮೃದ್ವಗ್ನಿಯಲ್ಲಿ ಅದೇ ಭಂಗೀಸೊಪ್ಪಿನ ರಸದಲ್ಲಿ ಒಂದುಜಾವ ಚುರುಕುಕೊಡಲು ಶ್ವೇತವರ್ಣದ ರಸಭಸ್ಮವಾಗುವದು.

## ಸುವರ್ಣಭಸ್ಮ.

ನಾಲ್ಕು ಭಾಗ ಚಿನ್ನದತಗಡು, ಒಂದುಭಾಗ ರಸಭಸ್ಮ, ಈ ರಸ ಭಸ್ಮವನ್ನು ಮಾವಿನೆಲೆಯ ರಸದಿಂದ ಮರ್ದಿಸಿ, ಚಿನ್ನದತಗಡಿಗೆ ಲೇಪಿಸಿ, ಒಂದು ಶ್ರಾವೆಯಲ್ಲಿರಿಸಿ, ಮೇಲೊಂದು ಮುಚ್ಚಳವಂ ಮುಚ್ಚಿ, ಕಪ್ಪಟೆ ಮಟ್ಟಿಯಂ ಕಟ್ಟಿ ಗಜಪುಟವಂ ಕೊಡಲು ಭಸ್ಮವಾಗುವದು.

## ಲೋಹಭಸ್ಮ.

ಒಂದುಪಾವು ಇಂಗಲೀಕ, ಒಂದುಪಾವು ಲೋಹದತಗಡು, ಈ ಇಂಗಲೀಕವನ್ನು ಮೊಲೆವಾಲಲ್ಲಿ ಅರೆದು, ಕಬ್ಬಿಣದ ತಗಡುಗಳಿಗೆ ಲೇಪಿಸಿ, (ಅಥವಾ) ಲೋಳಿಸರದ ರಸವನ್ನಾದರೂ ಲೇಪಿಸಿ, ಒಂದು ಹರಿವಾಣದಲ್ಲಿರಿಸಿ, ಮೇಲೊಂದು ಮುಚ್ಚಳವಂ ಮುಚ್ಚಿ ಕಪ್ಪಟ ಚೀರು ಮಾಡಿ ಒಣಗಿಸಿ, ಗಜಪುಟವಂ ಕೊಟ್ಟು, ಆರಿದಮೇಲೆ ತೆಗೆದು, ಮತ್ತೆ ಇಪ್ಪತ್ತು ಭಾಗಕ್ಕೆ ಒಂದು ಭಾಗ ಇಂಗಲೀಕವಂಹಾಕಿ, ಲೋಳಿಸರದಲ್ಲಿ ಮೂರುಪುಟ, ತ್ರಿಫಲೇಕಷಾಯದಲ್ಲಿ ಆರುಪುಟ, ನಿಂಬೇಹಣ್ಣಿನರಸದಲ್ಲಿ ಆರುಪುಟ, ಅಂಬಿಲದಲ್ಲಿ ಆರುಪುಟವಂಹಾಕಿದರೆ ಉಕ್ಕು, ಕಬ್ಬಿಣ, ಕಾಂತ, ಈ ಮೂರೂ ಶುದ್ಧಭಸ್ಮವಾಗುವವು.

## ಅಭ್ರಕಭಸ್ಮ.

ಅಭ್ರಕವನ್ನು ಇದ್ದಲಿನಲ್ಲಿ (ಅಥವಾ) ಗೋಣೀತಟ್ಟಿನಲ್ಲಿಹಾಕಿ ಎರಡು ಗಳಿಗೆ ತನಕ ಊದಿದರೆ ಪ್ರತಿಶಬ್ದವನ್ನು ಕೊಡದಿರಲು ಬೆಂಕಿಯಲ್ಲಿಟ್ಟು ಊದಿದರೆ ಅಭ್ರಕ ಒಡೆದು ಹಿಟ್ಟಾಗುವದು. ಅದು ಶುದ್ಧ ವಜ್ರಾಭ್ರಕ ವೆನಿಸಿಕೊಳ್ಳುವದು. ಆ ವಜ್ರಾಭ್ರಕವನ್ನು ಶುದ್ಧಿಮಾಡಿಕೊಂಡು, ಮೂಲಂಗೀಸೊಪ್ಪಿನ ರಸದಿಂದ ಒಂದುಜಾವ ಮಡಿಕೆಯಲ್ಲಿ ಕಲಸಿ, ಖಲ್ವದಲ್ಲಿಟ್ಟು, ಮೆಲ್ಲನೆ ಕುಟ್ಟಿದರೆ ಧಾನ್ಯಾಭ್ರಕವಾಗುವದು. ಅದಂ ಮತ್ತೆ ಮೂಲಂಗೀಸೊಪ್ಪಿನ ರಸದಿಂ ಮರ್ದಿಸಿ, ಒಂದು ಶ್ರಾವೆಯಲ್ಲಿಹಾಕಿ, ಮೇಲೊಂದು ಶ್ರಾವೆಯಂ ಮುಚ್ಚಿ, ಗಜಪುಟವಂಕೊಟ್ಟು, ಸಾಂಗ ಶೀತಲವಾದಮೇಲೆ ತೆಗೆದು ಖಲ್ವದೊಳುಹಾಕಿ ಕಲಸಿ ವಸ್ತ್ರಗಾಳಿತವಂ ಮಾಡಿ, ಆ ಚೂರ್ಣಕ್ಕೆ ಗರುಗದಸೊಪ್ಪಿನ ರಸದಿಂದೇಳುಭಾವನೆಯಂ ಕೊಟ್ಟು, ಕಲಸಿ, ಹಿಂದಣಕ್ರಮದಲ್ಲಿ ಗಜಪುಟವಂಕೊಟ್ಟು, ಮತ್ತೆ ತೆಗೆದು, ಈ ಕ್ರಮದಲ್ಲಿ ಆದ್ಯಂತ ಏಳು ಗಜಪುಟವಂ ಕೊಡಲು ಅಭ್ರಕ ಭಸ್ಮವಹುದು.

# ತಾಮ್ರಭಸ್ಮ.

ಒಂದೇಸೇರು ಚೊಕ್ಕ ತಾಮ್ರವನ್ನು ಶಿಲುವಾಗಿ ತಗಡುಗಳಂಮಾಡಿ, ಲಿಂಬೇಹುಳಿ, ಸಮುದ್ರದಲವಣ ಸಹ ಕದಡಿ, ಒಂದುಗಡಿಗೆಗೆ ತುಂಬಿ, ಆ ರಸಕ್ಕೆ ತಗಡುಗಳಂಹಾಕಿ, ಒಲೇಮೇಲಿರಿಸಿ, ನಾಲ್ಕುಗಳಿಗೆ ಕುದಿಸಲು ನೊರೆಬರುವದು. ಆ ನೊರೆಯನ್ನು ತೆಗೆಯುತ್ತಾ ಒಂದುಜಾವ ಕುದಿಸು ವದು. ಈ ಪ್ರಕಾರ ಏಳುಬಾರಿ ಕುದಿಸಿ ತೆಗೆದು, ಆಮೇಲೆ ಒಂದು ಗಡಿಗೆಗೆ ನಿಂಬೇಹುಳಿ, ಅಂಬಿಲ, ಸಮುದ್ರಲವಣ, ಇವುಗಳನ್ನು ಹಾಕಿ, ಅದರಲ್ಲಿ ಏಳುಬಾರಿ ಕುದಿಸಿ, ಆಮೇಲೆ ಉದ್ದಿನಹಿಟ್ಟು ಅಂಬಿಲಗಳಂ ಕಲಸಿ, ಅದರಲ್ಲಿ ಒಂದಾವರ್ತಿ ಕುದಿಸಿ, ಕುಂಬಳಕಾಯಿ ರಸದಲ್ಲಿ ಒಂದು ಬಾರಿಕುದಿಸಿ, ತೆಗೆಯಲು ತಾಮ್ರಶುದ್ಧಿಯಾಗುವದು. ಈ ಶುದ್ಧವಾದ ತಾಮ್ರದ ತಗಡು ಅರ್ಧಸೇರು, ಶೋಧಿಸಿದ ರಸ ಒಂದುಸೇರು, ಈ ಎರ ಡನ್ನೂ ನಿಂಬೇಹುಳಿಯಲ್ಲಿ ಮರ್ದಿಸಿ, ಆಮೇಲೆ ಆ ರಸವನ್ನು ತಾಮ್ರದ ತಗಡುಗಳಿಗೆ ಲೇಪಿಸಿ, ಎರಡುಜಾವ ಆರಿಸಿ, ಪಡುಗದೊಳಿರಿಸಿ, ಮೇ ಲೊಂದು ಪಡುಗವಂ ಮುಚ್ಚಿ ಅಳಲೇಕಾಯಿ ಚೂರ್ಣವಂ ಬೆಲ್ಲದಲ್ಲಿ ಮರ್ದಿಸಿ, ಸಂಧಿಲೇಪವಂ ಮಾಡಿ, ಒಂದು ಮಡಿಕೆಗೆ ನಾಲ್ಕುಸೇರು ಉಪ್ಪುತುಂಬಿ, ಆ ಉಪ್ಪಿನಮೇಲೆ ಆ ತಾಮ್ರದತಗಡಿನ ಶ್ರಾವೆಯನ್ನಿಟ್ಟು, ಆ ಉಪ್ಪು ಮುಚ್ಚುವಹಾಗೆ ಒಂದು ಶ್ರಾವೆಯಂ ಮುಚ್ಚಿ, ಪೂರ್ವೋಕ್ತ ರೀತ್ಯಾ ಸಂಧಿಬಂಧವಂಮಾಡಿ, ಅದರ ಮೇಲೆ ಮರಳಂ ತುಂಬಿ, ಆ ಮಡಿಕೆಯ ಬಾಯಿಯಂ ಮುಚ್ಚಿ, ಅದೇ ಲೇಪವಂ ಮಾಡಿ, ಒಲೇಮೇಲಿರಿಸಿ, ಐದುದಿನ ಗಾಢಾಗ್ನಿಯಲ್ಲಿ ಪಚಿಸಿ ತೆಗೆದು, ಭಸ್ಮವನ್ನು ಖಲ್ವದಲ್ಲಿಟ್ಟು ಲೋಳಿಸರದಲ್ಲಿ ಮರ್ದಿಸಿ, ಲಘುಪುಟಗಳಂ ಮೂರುಬಾರಿ ಕೊಟ್ಟು, ಆಬಳಿಕ ತ್ರಿಫಲೆಯಂ ಅಂಬಿಲದಲ್ಲಿಹಾಕಿ ಕಷಾಯವಂ ಕಾಸಿ, ಅದರಲ್ಲಿ ಆ ಭಸ್ಮವಂ ಮರ್ದಿಸಿ, ಮೂರುಪುಟವಂ ಕೊಟ್ಟು, ಆಮೇಲೆ ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆಗಳಲ್ಲಿ ಮರ್ದಿಸಿ, ಮೂರುಪುಟಗಳಂ ಕೊಡಲು, ತಾಮ್ರಭಸ್ಮ ಶುದ್ಧಿಯಾಗುವದು. ಈ ತಾಮ್ರಭಸ್ಮವು ಅಮೃ ತಕ್ಕೆ ಸಮಾನವಾದದ್ದು.

ಈ ನನ್ನ ಟೀಕಿನಲ್ಲಿ, ಲೋಕರೂಢಿಯನ್ನನುಸರಿಸಿ, ಶಬ್ದಮಣಿ ದರ್ಪಣಕ್ಕೆ ವಿರುದ್ಧವಾದಾಗ್ಯೂ, ಅಲ್ಪಪ್ರಾಣಾಕ್ಷರಗಳು ಮೊದಲಾದ ಸ್ಥಳಗಳಲ್ಲಿ ಮಹಾಪ್ರಾಣಾಕ್ಷರಗಳು ಮೊದಲಾದವುಗಳು ಸೇರಿಸಲ್ಪಟ್ಟಿವೆ.

ವಿದ್ಯಾವಲ್ಲೋಕನಂದ್ಯಾದ್ಗುರಳಪುರಸುಧೀಸಾರ್ವಭೌಮಾದುಪಾತ್ತಂ
ಯೇನಶ್ರೀವಾಗ್ಭಟಾರ್ಯೋತ್ತಮ ವಚನತತೇರ್ಲೀನತತ್ತ್ವಾರ್ಥಬೃಂದಂ ।
ಟೀಕಾಲೋಲಂಬರಾಜೋತ್ತಮರಚಿತಕೃತೇರ್ ವೈದ್ಯಜೀವನ್ಯಭಿಖ್ಯಾ
ಖ್ಯಾತಾಯಾದೀಪಿಕಾಖ್ಯಾಂವ್ಯರಚಯದಮಲಾಂಪುಟ್ಟಸಾಮ್ಯಯ್ಯಸೂರಿಃ॥

ವೈದ್ಯಜೀವನದೀಪಿಕಾ ಸಮಾಪ್ತಾ.

---

॥ ಶ್ರೀರಾಮಾರ್ಪಣಮಸ್ತು. ॥

# ಪರಿಶಿಷ್ಟ

## ಔಷಧರಚನೆ.

---

### ಕಷಾಯವು.

[ಸೂಚನೆ:—ಔಷಧಗಳಿಗೆ ಮೂಲಿಕೆಗಳನ್ನು ಉಪಯೋಗಿಸುವಾಗ ಟೀಕಾಕಾರರು ಪೀಠಿಕೆಯಲ್ಲಿ ಬರೆದಿರುವ ವಿಷಯಗಳಿಗೆ ಅಗತ್ಯ ಗಮನ ಕೊಡಬೇಕು.]

ಕಷಾಯ ದ್ರವ್ಯಗಳನ್ನು ಕಸಕಡ್ಡಿಗಳಿಲ್ಲದಂತೆ ಆರಿಸಿ, ಹುಡಿಮಾಡಿ, ಮಡಿಕೆಯಲ್ಲಿಟ್ಟು ಸರಕುಗಳ ತೂಕದ ಹದಿನಾರರಷ್ಟು ನೀರು ಹಾಕಿ, ಮಂದಾಗ್ನಿಯಿಂದ ಮಡಿಕೆಯಲ್ಲಿ ಕಾಯಿಸಿ, ಎಂಟನೆಯ ಒಂದು ಭಾಗ ಮಾತ್ರ ನೀರು ನಿಲ್ಲುವಂತೆ ಕುದಿಸಿ, ನಂತರ ಕೆಳಕ್ಕೆ ತೆಗೆದು–ಸುಖೋಷ್ಣವಾಗಿರುವಾಗಲೇ ಶೋಧಿಸಿ, ಪರಿಮಾಣಕ್ಕೆ ಮೀರದಂತೆ ಸಕ್ಕರೆಯನ್ನು ಸೇರಿಸಿ ಬರೀಹೊಟ್ಟೆಯಲ್ಲಿ ರೋಗಿಗೆ ಕುಡಿಸಬೇಕು. ಕಷಾಯವು ಕುದಿಯುತ್ತಿರುವಾಗ ಮುಚ್ಚಬಾರದು.

ಮೂಲಿಕೆಗಳನ್ನು ಬಿಸಿನೀರಿನಲ್ಲಿ ನೆನೆಸಿ, ಕೈಯಿಂದ ಹಿಸುಕಿ. ಶೋಧಿಸಿಕೊಳ್ಳುವ ಕ್ರಮಕ್ಕೆ '**ಫಾಂಟ**' ವೆಂದೂ, ತಣ್ಣೀರಿನಲ್ಲಿ ನೆನೆಸಿ. ಕೈಯಿಂದ ಹಿಸುಕಿ ಹಿಂಡಿಕೊಳ್ಳುವುದಕ್ಕೆ '**ಹಿಮ**' ವೆಂದೂ, ಹಸಿಯದಾದ ಬೇರು, ಎಲೆ ಮೊದಲಾದವುಗಳನ್ನು ಕುಟ್ಟಿ ಅಥವಾ ಶಾಕಮಾಡಿ ಹಿಂಡಿಕೊಳ್ಳುವುದಕ್ಕೆ '**ಸ್ವರಸ**' ವೆಂದೂ, ಒಣಗಿದ ಸರಕುಗಳನ್ನು ನೀರುಹಾಕಿ ಕುಟ್ಟಿ ಅಥವಾ ಅರದು ಹಿಂಡಿಕೊಳ್ಳುವುದಕ್ಕೆ '**ಕಲ್ಕ**' ವೆಂದೂ, ಒಣಗಿದ ಸರಕುಗಳನ್ನು ಬೇಯಿಸುವ ಕ್ರಮಕ್ಕೆ '**ಕ್ವಾಥ**' ವೆಂದೂ ಕಷಾಯಗಳಲ್ಲಿ ಹಲವು ಬಗೆಗಳುಂಟು.

ವಾತರೋಗದಲ್ಲಿ ಕಷಾಯದ ತೂಕದ ನಾಲ್ಕರಲ್ಲೊಂದಂಶದಷ್ಟೂ, ಪಿತ್ತರೋಗದಲ್ಲಿ ಎಂಟರಲ್ಲೊಂದಂಶದಷ್ಟೂ, ಕಫರೋಗದಲ್ಲಿ ಹದಿನಾರರ

ಲ್ಲೊಂದಂಶದಷ್ಟು, ಸಕ್ಕರೆಯನ್ನು ಬೆರಸಬೇಕು. ಜೇನುತುಪ್ಪವಾದರೆ ವಾತರೋಗದಲ್ಲಿ ಹದಿನಾರು, ಪಿತ್ತರೋಗದಲ್ಲಿ ಎಂಟು, ಕಫರೋಗದಲ್ಲಿ ನಾಲ್ಕು ಭಾಗಗಳಲ್ಲಿ ಒಂದು ಭಾಗವನ್ನು ಸೇರಿಸಬೇಕು.

ಜೀರಿಗೆ, ಗುಗ್ಗುಲ, ಮೆಣಸು, ಶುಂಠಿ, ಹಿಪ್ಪಲಿ, ಜವಖಾರ, ಸೈಂಧವ, ಶಿಲಾಜತು, ಇಂಗು ಈ ದ್ರವ್ಯಗಳನ್ನು ಕಾಲುರೂಪಾಯಿ ತೂಕ ಮಾತ್ರವೇ ಉಪಯೋಗಿಸಬೇಕು. ಕಲ್ಕ, ಚೂರ್ಣ, ಹಾಲು, ತುಪ್ಪ, ಬೆಲ್ಲ, ತೈಲ, ಗೋಮೂತ್ರಾದಿಗಳನ್ನು ಸೇರಿಸಬೇಕಾದ ಸಮಯದಲ್ಲಿ ಒಂದು ರೂಪಾಯಿ ತೂಕವನ್ನು ಮಾತ್ರ ಉಪಯೋಗಿಸಬೇಕು.

**ಪ್ರಮಾಣ.**—ಮಕ್ಕಳಿಗೆ ಕಾಲುರೂಪಾಯಿ ತೂಕದಿಂದ ಒಂದು ರೂಪಾಯಿ ತೂಕದವರಿಗೂ, ದೊಡ್ಡವರಿಗೆ ಒಂದರಿಂದ ನಾಲ್ಕುರೂಪಾಯಿ ತೂಕದವರಿಗೂ ಕೊಡಬಹುದು.

ಪಾನೀಯಂ ಷೋಡಶಗುಣಂ ಕ್ಷುಣ್ಣೇ ದ್ರವ್ಯಪಲೇ ಕ್ಷಿಪೇತ್ ।
ಮೃತ್ಪಾತ್ರೇ ಕ್ವಾಥಯೇತ್ಗ್ರಾಹ್ಯಂ ಅಷ್ಟಮಾಂಶಾವಶೇಷಿತಂ ॥
ತಜ್ಜಲಂ ಪಾಯಯೇದ್ಧೀಮಾನ್ ಕೋಷ್ಣಂ ಮೃದ್ವಗ್ನಿಸಾಧಿತಂ ।
ಶೃತಃಕ್ವಾಥಃ ಕಷಾಯಶ್ಚ ನಿರ್ಯೂಹಃ ಸನಿಗದ್ಯತೇ ॥
ಆಹಾರರಸಪಾಕೇ ಚ ಸಂಜಾತೇ ದ್ವಿಪಲೋನ್ಮಿತಂ ।
ವೃದ್ಧವೈದ್ಯೋಪದೇಶೇನ ಪಿಬೇತ್ಕ್ವಾಥಂ ಸುಪಾಚಿತಂ ॥
ಕ್ವಾಥೇ ಕ್ಷಿಪೇತ್ ಸಿತಾಮಂಶೈಃ ಚತುರ್ಥಾಷ್ಟಮ ಷೋಡಶೈಃ ।
ವಾತಪಿತ್ತಕಫಾತಂಕೇ ವಿಪರೀತಂ ಮಧುಸ್ಮೃತಂ ॥
ಜೀರಕಂ ಗುಗ್ಗುಲಂ ಕ್ಷಾರಂ ಲವಣಂಚ ಶಿಲಾಜತು ।
ಹಿಂಗು ತ್ರಿಕಟುಕಂಚೈವ ಕ್ವಾಥೇ ಶಾಣೋನ್ಮಿತಂ ಕ್ಷಿಪೇತ್ ॥
ಕ್ಷೀರಂ ಘೃತಂ ಗುಡಂ ತೈಲಂ ಮೂತ್ರಂಚಾನ್ಯ ದ್ರವಂತಥಾ ।
ಕಲ್ಕಂ ಚೂರ್ಣಾದಿಕಂ ಕ್ವಾಥೇ ನಿಕ್ಷಿಪೇತ್ಕರ್ಷಸಮ್ಮಿತಂ ॥
ಅಪಿಧಾನ ಮುಖೇ ಪಾತ್ರೇ ಜಲಂ ದುರ್ಜಲತಾಂವ್ರಜೇತ್ ।
ತಸ್ಮಾದಾವರಣಂತ್ಯಕ್ತ್ವಾ ಕ್ವಾಥಾದೀನಾಂ ವಿನಿಶ್ಚಯಃ ॥
ಕ್ಷುಣ್ಣದ್ರವ್ಯಪಲಂಸಮ್ಯಕ್ ಷಡ್ಭಿಃ ನೀರಪಲೈಃ ಪ್ಲುತಃ ।

ನಿಶೋಷಿತಂ ಹಿಮಸ್ತಸ್ಯಾತ್ ತಥಾ ಶೀತಕಷಾಯಕಃ ॥
ತನ್ಮಾನಂ ಫಾಂಟವತ್ಜ್ಞೇಯಂ ಸರ್ವತ್ರೈವೈಷನಿಶ್ಚಯಃ ।
ಕ್ಷುಣ್ಣದ್ರವ್ಯಪಲೇಸಮ್ಯಕ್ ಜಲಮುಷ್ಣಂ ವಿನಿಕ್ಷಿಪೇತ್ ॥
ಮೃತ್ಪಾತ್ರೇ ಕುಡುಪೋನ್ಮಾನಂ ತತಸ್ತುಸ್ರಾವಯೇತ್ಪಟಾತ್ ।
ಸಸ್ಸ್ಯಾತ್ಚೂರ್ಣದ್ರವಃ ಫಾಂಟಃತನ್ಮಾನಂ ದ್ವಿಪಲೋನ್ಮಿತಂ ॥
ಮಧುಶ್ವೇತಾಗುಡಾದೀಂಶ್ಚ ಕ್ವಾಥವತ್ತತ್ರನಿಕ್ಷಿಪೇತ್ ।
ಆಹತಾತ್ತತ್ಕ್ಷಣಾಕೃಷ್ಟಾತ್ ದ್ರವ್ಯಾತ್ಕ್ಷುಣ್ಣಾತ್ ಸಮುದ್ಭವೇತ್ ॥
ವಸ್ತ್ರನಿಷ್ಪೀಡಿತೋ ಯಸ್ಸ್ಯಾತ್ ರಸಸ್ಸ್ವರಸಉಚ್ಯತೇ ।

---

## ಕಲ್ಕ.

ಹಸೀಮೂಲಿಕೆಗಳನ್ನು ಅರೆದೂ, ಒಣಗಿದ ಮೂಲಿಕೆಗಳನ್ನು ನೀರು ಹಾಕಿ ಅರೆದೂ, ನಯವಾಗಿ ಮಾಡಿ ಸೇವಿಸುವುದಕ್ಕೆ ಕಲ್ಕವೆಂದು ಹೆಸರು. ಜೇನುತುಪ್ಪ, ತುಪ್ಪ, ಎಣ್ಣೆಗಳಲ್ಲಿ ಹೇಳಿರುವುದನ್ನು ಅರೆದಿರುವ ಕಲ್ಕಕ್ಕೆ ಎರಡರಷ್ಟು, ಸಕ್ಕರೆ, ಬೆಲ್ಲಗಳನ್ನು ಸಮನಾಗಿಯೂ, ಹಾಲು ನೀರುಗಳನ್ನು ನಾಲ್ಕರಷ್ಟೂ ಸೇರಿಸಬೇಕು.

**ಪ್ರಮಾಣ.**—ಒಂದು ರೂಪಾಯಿ ತೂಕ.

ದ್ರವ್ಯಮಾರ್ದ್ರಂ ಶಿಲಾಪಿಷ್ಟಂ ಶುಷ್ಕಂವಾ ಸಜಲಂಭವೇತ್ ।
ಪ್ರಕ್ಷೇಪಾವಾಪಕಲ್ಕಾಸ್ತೇ ತನ್ಮಾತ್ರಾಕರ್ಷಸಮ್ಮಿತಾ ॥

---

## ಚೂರ್ಣ.

ಒಣಗಿದ ಮೂಲಿಕೆಗಳನ್ನು ನಯವಾಗಿ ಪುಡಿಮಾಡಿ ಬಟ್ಟೆಯಿಂದ ಶೋಧಿಸಿದುದನ್ನು ಚೂರ್ಣವೆನ್ನುವರು. ಬೆಲ್ಲವನ್ನು ಚೂರ್ಣಕ್ಕೆ ಸಮನಾಗಿಯೂ, ಸಕ್ಕರೆಯೂ, ಜೇನುತುಪ್ಪ ಮುಂತಾದ ಜಿಡ್ಡುಗಳೂ ಎರಡರಷ್ಟೂ ಸೇರಿಸಬೇಕು. ಹಾಲು, ಗೋಮೂತ್ರ ಮೊದಲಾದ ಅನುಪಾನಗಳೂ ನಾಲ್ಕರಷ್ಟಿರಬೇಕು. ಇಂಗನ್ನು ಮಾತ್ರ ಹುರಿದೇಹಾಕಬೇಕು.

**ಪ್ರಮಾಣ.**—ಒಂದು ರೂಪಾಯಿ ತೂಕ.

ಅತ್ಯಂತಶುಷ್ಕಂಯದ್ದ್ರವ್ಯಂಸುಪಿಷ್ಟಂವಸ್ತ್ರಗಾಳಿತಂ ।
ತತ್ಸ್ಯಾತ್ ಚೂರ್ಣರಜಃಕ್ಷೋದಃ ತನ್ಮಾತ್ರಾಕರ್ಷಸಮ್ಮಿತಾ ॥
ಚೂರ್ಣೇಗುಡಸ್ಸಮೋದೇಯಃ ಶರ್ಕರಾದ್ವಿಗುಣಾಭವೇತ್ ।
ಚೂರ್ಣೇಷುಭರ್ಜಿತಂಹಿಂಗು ಜೀರಕಂಚೇತಿಕೇಚನ ॥

---

## ವಟಕ.

ಬೆಲ್ಲ--ಸಕ್ಕರೆ--ಗುಗ್ಗುಳಗಳಪಾಕದಲ್ಲಿ ಚೂರ್ಣವನ್ನು ಹಾಕಿ, ಗುಳಿಗೆಗಳಾಗಿ ಮಾಡುವುದಕ್ಕೆ--ಮೋದಕ, ವಟಿ, ಗುಟಿಕಾಮೊದಲಾದ ಹೆಸರುಗಳುಂಟು.

ಬೆಲ್ಲ ಸಕ್ಕರೆಗಳನ್ನು ಚೂರ್ಣದ ನಾಲ್ಕರಷ್ಟೂ, ಗುಗ್ಗುಳವನ್ನು ಎರಡರಷ್ಟೂ ಉಪಯೋಗಿಸಬೇಕು. ಗುಗ್ಗುಳವನ್ನೂ ಜೇನುತುಪ್ಪವನ್ನೂ ಉಪಯೋಗಿಸುವುದಾದರೆ ಸಮನಾಗಿರಬೇಕು.

**ಪ್ರಮಾಣ** --ಒಂದು ರೂಪಾಯಿ ತೂಕ.

ವಟಕಾಅಥಕಥ್ಯಂತೆ ತನ್ನಾಮಗುಟಿಕಾವಟಿ ।
ಮೋದಕೋವಟಿಕಾಪಿಂಡೀ ಗುಡೋವರ್ತಿಸ್ತಥೋಚ್ಯತೇ ॥
ಲೇಹವತ್ ಸಾಧ್ಯತೇ ವಹ್ನೌ ಗುಡೋವಾಶರ್ಕರಾಥವಾ ।
ಗುಗ್ಗುಲುರ್ವಾಕ್ಷಿಪೇತ್ತತ್ರ ತಚ್ಚೂರ್ಣಂನಿರ್ಮಿತಾವಟೀ ॥
ಕುರ್ಯಾದವಹ್ನಿಸಿದ್ಧೇನ ಕ್ವಚಿದ್ಗುಗ್ಗುಲುನಾವಟೀ ।
ದ್ರವೇಣಮಧುನಾವಾಪಿ ಗುಟಿಕಾಂಕಾರಯೇದ್ಬುಧಃ ॥
ಸಿತಾಚತುರ್ಗುಣಾದೇಯಾ ವಟೀಷುದ್ವಿಗುಣೋಗುಡಃ ।
ಸರ್ವಚೂರ್ಣಸಮಃ ಕಾರ್ಯೋ ಗುಗ್ಗುಲುರ್ಮಧುತತ್ಸಮಂ ॥
ದ್ರವಂಚದ್ವಿಗುಣಂದೇಯಂ ಮೋದಕೇಷುಭಿಷಗ್ವರೈಃ ।
ಕರ್ಷಪ್ರಮಾಣಾಂತನ್ಮಾತ್ರಾಂ ಬಲಂದೃಷ್ಟ್ವಾಪ್ರಯೋಜಯೇತ್ ॥

---

## ಲೇಹ್ಯಪ್ರ.

ಕಷಾಯಾದಿಗಳನ್ನು ಪುನಃ ಪುನಃ ಕಾಯಿಸಿ, ಹದಕ್ಕೆ ತಂದರೆ ಅದಕ್ಕೆ ರಸಕ್ರಿಯೆ ಅಥವಾ ಲೇಹವೆಂದು ಹೆಸರು. ಸಕ್ಕರೆಯನ್ನು ನೀರು, ಹಾಲು, ಗೋಮೂತ್ರಾದಿಗಳನ್ನು ಚೂರ್ಣಕ್ಕೆ ನಾಲ್ಕರಷ್ಟೂ, ಬೆಲ್ಲವನ್ನು ಎರಡರಷ್ಟೂ ಹಾಕಬೇಕು. ಲೇಹವು ಸರಿಯಾಗಿ (ಪಾಕವಾದರೆ) ಯಳದರೆ ದಾರದಂತೆ ಬರುವುದು. ನೀರಿನಲ್ಲಿ ಹಾಕಿದರೆ ಮುಳುಗುವುದು. ಬೆರಳಿನಲ್ಲಿ ಒತ್ತಿದರೆ ರೇಖೆಗಳ ಗುರುತುಗಳು ಸ್ಪಷ್ಟವಾಗಿ ಕಾಣಿಸುವುವು. ಉತ್ತಮವಾಗಿ ಪಾಕ ವಾದ ಲೇಹ್ಯವು ಸುವಾಸನೆಯಿಂದಲೂ ಒಳ್ಳೆಯಬಣ್ಣದಿಂದಲೂ ರುಚಿ ಯಿಂದಲೂ ಕೂಡಿರುವುದು.

**ಪ್ರಮಾಣ.**—ಒಂದು ರೂಪಾಯಿ ತೂಕ.

ಕ್ವಾಥಾದೇರ್ಯತ್ಪುನಃಪಾಕಾತ್ ಘನತ್ವಂಸಾ ರಸಕ್ರಿಯಾ ।
ಸೋವಲೇಹಶ್ಚ ಲೇಹಶ್ಚ ತನ್ಮಾತ್ರಾಸ್ಯಾತ್ಪಲೋನ್ಮಿತಾ ॥
ಸಿತಾ ಚತುರ್ಗುಣಾಕಾರ್ಯಾ ಚೂರ್ಣಾಚ್ಚದ್ವಿಗುಣೋಗುಡಃ ।
ದ್ರವಂಚತುರ್ಗುಣಂದದ್ಯಾತ್ ಇತಿಸರ್ವತ್ರನಿಶ್ಚಯಃ ॥
ಸುಪಕ್ವೇತಂತು ಮತ್ವಂಸ್ಯಾತ್ ಅವಲೇಹೋಪ್ಸುಮಜ್ಜತಿ ।
ಖರತ್ವಂಪೀಡಿತೇಮುದ್ರಾ ಗಂಧವರ್ಣರಸೋದ್ಭವಾ ॥

---

## ಸ್ನೇಹಪಾಕವಿಧಿ.

### (ತೈಲ ಘೃತಾದಿಗಳು.)

ಕಲ್ಕದ್ರವ್ಯದ ನಾಲ್ಕರಷ್ಟು ತೈಲ ಅಥವಾ ಘೃತವನ್ನು ಉಪಯೋಗಿಸ ಬೇಕು. ಹಾಲು ಗೋಮೂತ್ರಾದಿ ದ್ರವವಸ್ತುಗಳನ್ನು ತೈಲ, ಘೃತಗಳ ನಾಲ್ಕರಷ್ಟನ್ನು ಬೆರಸಿ, ತೈಲ ಅಥವಾ ಘೃತ ಶೇಷ ನಿಲ್ಲುವವರೆಗೆ ಕಾಯಿಸ ಬೇಕು.

ಕಷಾಯಕ್ಕೆ ಸಂಬಂಧಿಸಿದ ಮೂಲಿಕೆಗಳ ನಾಲ್ಕರಷ್ಟು ನೀರನ್ನು ಹಾಕಿ, ಕಾಲುಭಾಗ ನಿಲ್ಲುವವರೆಗೂ ಕಾಯಿಸಿ, ಅದರಲ್ಲಿ ತೈಲ, ಘೃತಗಳನ್ನು

ಬೆರಸಿ, ನೀರೆಲ್ಲವೂ ಇಂಗಿ ಕೇವಲ ತೈಲ, ಘೃತಗಳು ನಿಲ್ಲುವವರಿಗೆ ಕಾಯಿಸ ಬೇಕು.

ಅಮೃತವಳ್ಳಿ ಮೊದಲಾದ ಹಸೀ ಪದಾರ್ಥಗಳಿಗೆ ಮೂಲಿಕೆಗಳ ನಾಲ್ಕರಷ್ಟೂ, ತಾರೇಕಾಯಿ ಮೊದಲಾದ ಕಠಿಣ ವಸ್ತುಗಳಿಗೂ, ಪಂಚಮೂಲಾದಿ ಸ್ವಲ್ಪ ಕಠಿಣ ವಸ್ತುಗಳಿಗೂ, ಎಂಟರಷ್ಟೂ, ಪದ್ಮಕಾಷ್ಠಾದಿ ಅತಿ ಕಠಿಣ ವಸ್ತುಗಳಿಗೆ ಹದಿನಾರರಷ್ಟೂ ನೀಡಬೇಕು.

ಆದುದರಿಂದ ಮೂರು ತೊಲೆ ವರೆಗಿನ ಮೂಲಿಕೆಗಳ ಕಷಾಯುವನ್ನು ಕಾಯಿಸುವುದಾದರೆ–ನೀರು ಕಷಾಯ ಸಾಮುಗ್ರಿಗಳ ಹದಿನಾರರಷ್ಟೂ, ಮೂರರಿಂದ ಹದಿನಾರು ತೊಲೆಗಳ ಪ್ರಮಾಣದವರಿಗೆ ಎಂಟರಷ್ಟೂ, ಅರವತ್ತನಾಲ್ಕರಿಂದ 4096 ತೊಲೆಗಳವರಿಗೆ ನಾಲ್ಕರಷ್ಟೂ ನೀರಿಡಬೇಕು.

ನೀರಿನಲ್ಲಿಯೇ ಮೂಲಿಕೆಗಳನ್ನು ಬೇಯಿಸುವುದಾದರೆ ತೈಲ, ಘೃತಗಳ ಚತುರ್ಥಾಂಶವೂ–ತೈಲ, ಘೃತಾದಿಗಳಿಂದಲೇ ಆದರೆ ಷಷ್ಠಾಂಶವೂ–ಮಾಂಸರಸ, ಹಾಲು, ಉಮ್ಮತ್ತಿರಸ, ಮೊಸರು, ಮಜ್ಜಿಗೆ, ಪುಷ್ಪರಸಗಳಿಂದಲಾದರೆ ಅಷ್ಟಮಾಂಶವೂ ಕಲ್ಕದ್ರವ್ಯಗಳನ್ನು ಹಾಕಬೇಕು.

ಕಲ್ಕದ್ರವ್ಯದ ಪಾಕವು ಚೆನ್ನಾಗಿ ಆಗುವುದಕ್ಕೆ ಘೃತತೈಲಗಳಿಗೆ ನಾಲ್ಕರಷ್ಟೂ ನೀರನ್ನು ಹಾಕಬೇಕು. ಸ್ನೇಹಪಾಕದಲ್ಲಿ ಹಾಲು, ಗೋಮೂತ್ರ ಮೊದಲಾದ ದ್ರವವಸ್ತುಗಳು ಐದಕ್ಕಿಂತ ಹೆಚ್ಚಾಗಿದ್ದರೆ ಘೃತ 'ತೈಲಗಳಿಗೆ ಸಮವಾಗಿಯೂ, ದ್ರವವಸ್ತುಗಳು ಐದಕ್ಕಿಂತ ಕಡಿಮೆಯಾಗಿದ್ದರೆ ನಾಲ್ಕರಷ್ಟೂ, ಪಾಕಗಳಲ್ಲಿ ಪುಷ್ಪಕಲ್ಕವನ್ನು ಹೇಳಿದ್ದರೆ ನಾಲ್ಕರಷ್ಟು ನೀರನ್ನು ಹಾಕಿಕೊಳ್ಳಬೇಕು.

ತೈಲವು ಪಾಕವಾಗಿದ್ದರೆ ಅದರೊಳಗಿನ ಕಲ್ಕವು ಬೆರಳುಗಳಿಂದ ಒತ್ತಿದರೆ ಬತ್ತಿಯುಹಾಗಾಗುವುದು. ಅದನ್ನು ಬೆಂಕಿಯಲ್ಲಿ ಹಾಕಿದರೆ ಪುರಪುರನೆ ಸದ್ದಾಗುವುದಿಲ್ಲ. ತೈಲಪಾಕವನ್ನು ನೊರೆಯಿಂದಲೂ–ಘೃತಪಾಕವನ್ನು ನೊರೆ ನಿಲ್ಲುವುದರಿಂದಲೂ ತಿಳಿಯಬಹುದು. ಚೆನ್ನಾಗಿ ಇಳಿದ ತೈಲದಲ್ಲಿ ಸುಗಂಧವೂ. ಬಣ್ಣವೂ, ರುಚಿಯೂ ಇರುವುವು.

## ಪ್ರಮಾಣ.—ಒಂದುತೊಲೆ.

ಕಲ್ಕಾಚ್ಚತುರ್ಗುಣೀಕೃತ್ಯ ಘೃತಂವಾತೈಲಮೇವಚ ।
ಚತುರ್ಗುಣೇದ್ರವೇಸಾಧ್ಯಂ ತಸ್ಯಮಾತ್ರಾಪಲೋನ್ಮಿತಾ ॥
ನಿಕ್ಷಿಪ್ಯಕ್ವಾಥಯೇತ್ತೋಯಂ ಕ್ವಾಥದ್ರವ್ಯಾಚ್ಚತುರ್ಗುಣಂ ।
ಪಾದಶಿಷ್ಟಂ ಗೃಹೀತ್ವಾಚ ಸ್ನೇಹಂತೇನೈವಸಾಧಯೇತ್ ॥
ಚತುರ್ಗುಣಂ ಮೃದುದ್ರವ್ಯೇ ಕಠಿಣೇಷ್ಟಗುಣಂ ಜಲಂ ।
ತಥಾಚಮಧ್ಯಮದ್ರವ್ಯೇದದ್ಯಾದಷ್ಟಗುಣಂಪಯಃ ॥
ಅತ್ಯಂತ ಕಠಿಣೇದ್ರವ್ಯೇ ನೀರಷೋಡಶಕಂ ಮತಂ ।
ಕರ್ಷಾದಿತಃ ಪಲಂಯಾವತ್ ಕ್ಷಿಪೇತ್ ಷೋಡಶಕಂಜಲಂ ॥
ತದೂರ್ಧ್ವಂ ಕುಡುವಂ ಯಾವತ್ ಕ್ಷಿಪೇದಷ್ಟಗುಣಂ ಪಯಃ ।
ಪ್ರಸ್ಥಾದಿತಃಕ್ಷಿಪೇನ್ನೀರಂ ಖಾರೀಯಾವಚ್ಚತುರ್ಗುಣಂ ॥
ಅಂಬುಕ್ವಾಥರಸೈರ್ಯತ್ರ ಪೃಥಕ್ ಸ್ನೇಹಸ್ಯಸಾಧನಂ ।
ಕಲ್ಕಸ್ಯಾಂಶಂ ತತ್ರದದ್ಯಾತ್ ಚತುರ್ಥಂಷಷ್ಠಮಷ್ಟಮಂ ॥
ದುಗ್ಧೇದಧ್ನಿರಸೇತಕ್ರೇ ಕಲ್ಕೋ ದೇಯೋಷ್ಟಮಾಂಶಕಃ ।
ಕಲ್ಕಸ್ಯಸಮ್ಯಕ್ ಪಾಕಾರ್ಥಂ ತೋಯಮತ್ರಚತುರ್ಗುಣಂ ॥
ದ್ರವಾಣಿಯತ್ರಸ್ನೇಹೇಷು ಪಂಚಾದೀನಿಭವಂತಿಹಿ ।
ತತ್ರಸ್ನೇಹಸಮಾನ್ಯಾಹುಃ ಯಥಾಪೂರ್ವಂ ಚತುರ್ಗುಣಂ ॥
ಕ್ವಾಥೇನಕೇವಲೇನೈವ ಪಾಕೋಯತ್ರೇರಿತಃಕ್ವಚಿತ್ ।
ಕ್ವಾಥ್ಯದ್ರವ್ಯಸ್ಯಕಲ್ಕೋಪಿ ತತ್ರಸ್ನೇಹೇಪ್ರಯುಜ್ಯತೆ ॥
ಕಲ್ಕಹೀನಸ್ತುಯಃಸ್ನೇಹಃ ಸಸಾಧ್ಯಃ ಕೇವಲದ್ರವೇ ।
ಪುಷ್ಪಕಲ್ಕಸ್ತುಯಃಸ್ನೇಹಃ ತತ್ರತೋಯಂ ಚತುರ್ಗುಣಂ ॥
ಸ್ನೇಹೇ ಸ್ನೇಹಾಷ್ಟಮಾಂಶಶ್ಚ ಪುಷ್ಪಕಲ್ಕಪ್ರಯುಜ್ಯತೇ ।

## ಪಾಕಲಕ್ಷಣ.

ವರ್ತಿವತ್ಸ್ನೇಹಕಲ್ಕಸ್ಸ್ಯಾತ್ ಯದಂಗುಲ್ಯಾವಿಮರ್ದಿತಃ ।
ಶಬ್ದಹೀನೋಗ್ನಿನಿಕ್ಷಿಪ್ತಃ ಸ್ನೇಹಸಿದ್ಧೋಭವೇತ್ತದಾ ॥
ಯದಾಫೇನೋದ್ಗಮಸ್ತೈಲೇ ಫೇನಶಾಂತಿಶ್ಚಸರ್ಪಿಷಿ ।
ಗಂಧವರ್ಣರಸೋತ್ಪತ್ತಿಃ ಸ್ನೇಹಸಿದ್ಧಿಃ ತದಾಭವೇತ್ ॥

## ಆಸವಾರಿಷ್ಟಗಳು.

ಪದಾರ್ಥಗಳನ್ನು ಬಹಳಕಾಲ ದ್ರವದಲ್ಲಿಟ್ಟಿದ್ದರೆ, ಆ ದ್ರವಗಳು ಆಸವ ಮತ್ತು ಅರಿಷ್ಟ ಯೆನ್ನಿಸಿಕೊಳ್ಳುತ್ತವೆ.

ಜಿನಸಿಗಳನ್ನು ಕಷಾಯಮಾಡಿ ಬಹಳಕಾಲ ಇಟ್ಟಿದ್ದರೆ **ಅರಿಷ್ಟ** ವೆಂದೂ, ಪಾಕವನ್ನು ಮಾಡದೆ ದ್ರವವನ್ನು ಸೇರಿಸಿ ಇಟ್ಟರೆ **ಆಸವ**ವೆಂದೂ **ಹೆ**ಸರು.

**ಪ್ರಮಾಣ.**—ಒಂದು ರೂಪಾಯಿನಿಂದ ನಾಲ್ಕು ರೂಪಾಯಿ ತೂಕದವರಿಗೂ ಕೊಡಬಹುದು.

ದ್ರವೇಷುಚಿರಕಾಲಸ್ಥಂ ದ್ರವ್ಯಂಯತ್ಸಂಧಿತಂ ಭವೇತ್ ।
ಆಸವಾರಿಷ್ಟ ಭೇದೈಸ್ತುತ್ ಪ್ರೋಚ್ಯತೇಭೇಷಜೋಚಿತಂ ॥
ಯದಪಕ್ವೌಷಧಾಂಬುಭ್ಯಾಂ ಸಿದ್ಧಂಮದ್ಯಂ ಸ ಆಸವಃ ।
ಅರಿಷ್ಟಃಕ್ವಾಥಸಿದ್ಧಸ್ಸ್ಯಾತ್ ತಯೋರ್ಮಾನಂಪಲೋನ್ಮಿತಃ ॥

# ಮಾನಪರಿಭಾಷೆ.

---

## ಕೋಷ್ಟಕಗಳು.

೩೦ ಪರಮಾಣುಗಳು = ೧ ತ್ರಸರೇಣು (ವಂಶೀ)
೬ ವಂಶಿಗಳು = ೧ ಮರೀಚಿ
೬ ಮರೀಚಿಗಳು = ೧ ರಾಜಿಕ
೩ ರಾಜಿಕಗಳು = ೧ ಸರ್ಷಪ
೮ ಸರ್ಷಪಗಳು = ೧ ಯವೆ
೪ ಯವೆಗಳು = ೧ ಗುಂಜಾ = $1\frac{7}{8}$ ಗ್ರೇನ
೬ ಗುಂಜಾಗಳು = ೧ ಮಾಷ (ಹೇಮ, ಧಾನ್ಯಕ) = $\frac{1}{16}$ ತೊಲ
೪ ಮಾಷಗಳು = ೧ ಶಾಣ (ಧರಣ, ಟಂಕ) = $\frac{1}{4}$ ತೊಲ.
೨ ಶಾಣಗಳು = ೧ ಕೋಲ (ಕ್ಷುದ್ರ, ವಟಕ, ವಂಕ್ಷಣ)
೨ ಕೋಲಗಳು = ೧ ಕರ್ಷ (ಪಾಣಿಮಾನಿಕ ಇತ್ಯಾದಿ) = 1 ತೊಲ
೨ ಕರ್ಷಗಳು = ೧ ಅರ್ಧಪಲ (ಶುಕ್ತಿ, ಅಷ್ಟಮಿಕ)
೨ ಶುಕ್ತಿಗಳು = ೧ ಪಲ (ಮುಷ್ಟಿ)

---

೨ ಪಲಗಳು = ೧ ಪ್ರಸೃತಿ = 8 ತೊಲಗಳು
೨ ಪ್ರಸೃತಿಗಳು = ೧ ಅಂಜಲಿ (ಕುಡುವ, ಅರ್ಧಮಾನ) = 16 ತೊಲ
೨ ಕುಡುವಗಳು = ೧ ಮಾನ (ಶರಾವ, ಅಷ್ಟಪಲ)
೨ ಶರಾವಗಳು = ೧ ಪ್ರಸ್ಥ = 64 ತೊಲ
೪ ಪ್ರಸ್ಥಗಳು = ೧ ಆಢಕ (ಕೊಳಗ) = ೬೪ ಪಲಗಳು [ತೊಲ
೪ ಆಢಕಗಳು = ೧ ದ್ರೋಣ (ರಾಶಿ, ನಲ್ವಣ, ಉನ್ಮಾನ) = 1024
೨ ದ್ರೋಣಗಳು = ೧ ಶೂರ್ಪ (ಕುಂಭ)
೨ ಶೂರ್ಪಗಳು = ೧ ದ್ರೋಣಿ (ವಾಹಾ, ಗೋಣೀ) = ೬೪ ಶರಾವಗಳು
೪ ದ್ರೋಣಿಗಳು = ೧ ಖಾರಿ = (೪೦೯೬ ಪಲಗಳು)

---

೨೦೦೦ ಪಲಗಳು = ೧ ಭಾರ = 8000 ತೊಲ

೧೦೦ ಪಲಗಳು = ೧ ತುಲ = 400 ತೊಲ

---

೪ ಮಾಷಗಳು = ೧ ಟಂಕ

೪ ಟಂಕಗಳು = ೧ ಅಕ್ಷ

೪ ಅಕ್ಷಗಳು = ೧ ಬಿಲ್ವ

೪ ಬಿಲ್ವಗಳು = ೧ ಕುಡುವ

೪ ಕುಡುವಗಳು = ೧ ಪ್ರಸ್ಥ

೪ ಪ್ರಸ್ಥಗಳು = ೧ ಆಢಕ

೪ ಆಢಕಗಳು = ೧ ರಾಶಿ

೪ ರಾಶಿಗಳು = ೧ ಗೋಣಿ

೪ ಗೋಣಿಗಳು = ೧ ಖಾರಿ

**ಸೂಚನೆ:**—ಈ ಅಳತೆಗಳಲ್ಲಿ "ಕುಡುವ" ಪ್ರಮಾಣದವರಿಗಿನ ದ್ರವ್ಯಗಳನ್ನು ಹೇಳಿದ್ದರೆ—ದ್ರವವಸ್ತುಗಳನ್ನೂ. ಹಸಿಮೂಲಿಕೆ, ಒಣಮೂಲಿಕೆಗಳನ್ನೂ ಸಮನಾಗಿಯೇ ಹಾಕಬೇಕು. ಪ್ರಸ್ಥಾದಿ ಪ್ರಮಾಣಗಳನ್ನು ಹೇಳಿರುವ ಔಷಧಿಗಳಲ್ಲಿ ದ್ರವ ಮತ್ತು ಹಸೀದ್ರವ್ಯಗಳಿಗೆರಡರಷ್ಟು ಒಣಮೂಲಿಕೆಗಳನ್ನು ಹಾಕಬೇಕು.

---

ಜಾಲಾಂತರ ಗತೇ ಭಾನೌ ಯತ್ಸೂಕ್ಷ್ಮಂ ದೃಶ್ಯತೇ ರಜಃ
ತಸ್ಯತ್ರಿಂಶತ್ತಮೋ ಭಾಗಃ ಪರಮಾಣು ಸ್ಸಉಚ್ಯತೇ ।
ತ್ರಸರೇಣುರ್ಬುಧೈಃಪ್ರೋಕ್ತ ಸ್ತ್ರಿಂಶದ್ಭಿಃ ಪರಿಮಾಣುಭಿಃ
ತ್ರಸರೇಣುಸ್ತು ಪರ್ಯಾಯ ನಾಮ್ನಾವಂಶೀ ನಿಗದ್ಯತೇ ॥
ಜಾಲಾಂತರಗತೈಸ್ಸೂರ್ಯ ಕರೈರ್ವಂಶೀವಿಲೋಕ್ಯತೇ
ಷಡ್ವಂಶೀಭಿರ್ಮರೀಚಿಸ್ಯಾ ತ್ತಾಭಿಷ್ಷಡ್ಭಿಸ್ತುರಾಜಿಕಾ ।
ತಿಸೃಭೀರಾಜಿಕಾಭಿಶ್ಚ ಸರ್ಷಪಃಪ್ರೋಚ್ಯತೇ ಬುಧೈಃ
ಯವೋಽಷ್ಟಸರ್ಷಪೈಃಪ್ರೋಕ್ತೋ ಗುಂಜಾಸ್ಯಾತ್ತಚ್ಚತುಷ್ಟಯಂ॥

ಷಡ್ಭಿಸ್ತುರಕ್ತಿಕಾಭಿಸ್ಸ್ಯಾತ್ ಮಾಷಕೋ ಹೇಮಧಾನ್ಯಕೌ
ಮಾಷೈಶ್ಚತುರ್ಭಿಶ್ಶಾಣಸ್ಸ್ಯಾದ್ಧರಣಸ್ಸನಿಗದ್ಯತೇ ।
ಟಂಕಸ್ಸಏವಕಥಿತಃ ತದ್ದ್ವಯಂ ಕೋಲಉಚ್ಯತೇ
ಕ್ಷುದ್ರಭೋವಟಕಶ್ಚೈವ ದ್ರಂಕ್ಷಣಸ್ಸನಿಗದ್ಯತೇ ॥
ಕೋಲದ್ವಯಂಚಕರ್ಷಃಸ್ಯಾ ತ್ಸಪ್ರೋಕ್ತಃಪಾಣಿಮಾನಿಕಾ
ಅಕ್ಷಃಪಿಚುಃಪಾಣಿತಲಂ ಕಿಂಚಿತ್ಪಾಣಿಶ್ಚತಿಂದುಕಂ ।
ಬಿಡಾಲಪದಕಂಚೈವ ತಥಾಷೋಡಶಿಕಾಮತಾ
ಕರಮಧ್ಯೋಹಂಸಪದಂ ಸುವರ್ಣಂ ಕಬಳಗ್ರಹಂ ॥
ಉದುಂಬರಂ ಚ ಪರ್ಯಾಯೈಃ ಕರ್ಷಏವನಿಗದ್ಯತೇ
ಸ್ಯಾತ್ಕರ್ಷಾಭ್ಯಾಮರ್ಧಪಲಂ ಶುಕ್ತಿರಷ್ಟಮಿಕಾತಥಾ ।
ಶುಕ್ತಿಭ್ಯಾಂಚಪಲಂಜ್ಞೇಯಂ ಮುಷ್ಟಿರಾಮ್ರಂಚತುರ್ಥಿಕಾ
ಪ್ರಕುಂಚಷ್ಷೋಡಶೀಬಿಲ್ವಂ ಪಲಮೇವಾತ್ರಕೀರ್ತ್ಯತೇ ॥
ಪಲಾಭ್ಯಾಂಪ್ರಸೃತಿರ್ಜ್ಞೇಯಾ ಪ್ರಸೃತಶ್ಚನಿಗದ್ಯತೇ
ಪ್ರಸೃತಿಭ್ಯಾಮಂಜಲಿಸ್ಸ್ಯಾತ್ ಕುಡವೋರ್ಧಶರಾವಕಃ ।
ಅಷ್ಟಮಾನಂಚಸಜ್ಞೇಯಃ ಕುಡವಾಭ್ಯಾಂಚಮಾನಿಕಾ
ಶರಾವೋಷ್ಟಪಲಂತದ್ವತ್ ಜ್ಞೇಯಮತ್ರವಿಚಕ್ಷಣೈಃ ॥
ಶರಾವಾಭ್ಯಾಂಭವೇತ್ಪ್ರಸ್ಥಃ ಚತುಷ್ಪ್ರಸ್ಥೈಸ್ತಥಾಢಕಂ
ಭಾಜನಂಕಂಸಪಾತ್ರಂಚ ಚತುಷ್ಷಷ್ಟಿಪಲಂಚತತ್ ।
ಚತುರ್ಭಿರಾಢಕೈರ್ದ್ರೋಣಃ ಕಲಶೋನಲ್ವಣೋರ್ಮಣಃ
ಉನ್ಮಾನಶ್ಚಘಟೋರಾಶಿಃ ದ್ರೋಣಪರ್ಯಾಯಸಂಜ್ಞಿಕಾಃ ॥
ದ್ರೋಣಾಭ್ಯಾಂಶೂರ್ಪಕುಂಭೌಚ ಚತುಃಷಷ್ಟಿಶರಾವಕಃ
ಶೂರ್ಪಾಭ್ಯಾಂಚಭವೇದ್ದ್ರೋಣೀ ವಾಹಾಗೋಣೀಚಸಾಸ್ಮೃತಾ ।
ದ್ರೋಣೀಚತುಷ್ಟಯಂಖಾರೀ ಕಥಿತಾಸೂಕ್ಷ್ಮಬುದ್ಧಿಭಿಃ
ಚತುಸ್ಸಹಸ್ರಪಲಿಕಾ ಷಣ್ಣವತ್ಯಧಿಕಾಚಸಾ ॥
ಪಲಾನಾಂದ್ವಿಸಹಸ್ರಂಚ ಭಾರಏಕಃಪ್ರಕೀರ್ತಿತಃ ।
ತುಲಾಪಲಶತಂಜ್ಞೇಯಂ ಸರ್ವತ್ರೈವೇಷನಿಶ್ಚಯಃ ॥

ಮಾಷಟಂಕಾಕ್ಷಬಿಲ್ವಾನಿ ಕುಡವಃಪ್ರಸ್ಥಮಾಢಕಂ ।
ರಾಶಿರ್ಗೋಣೀಖಾರಿಕೇತಿ ಯಥೋತ್ತರಚತುರ್ಗುಣಾಃ ॥
ಗುಂಜಾದಿಮಾನಮಾರಭ್ಯ ಯಾವತ್ಸ್ಯಾತ್ ಕುಡವಸ್ಥಿತಿಃ ।
ದ್ರವಾರ್ದ್ರಶುಷ್ಕದ್ರವ್ಯಾಣಾಂ ತಾವನ್ಮಾನಂಸಮಂಮತಂ ॥
ಪ್ರಸ್ಥಾದಿಮಾನಮಾರಭ್ಯ ದ್ವಿಗುಣಂತದ್ದ್ರವಾರ್ದ್ರಯೋಃ ।
ಮಾನಂತಥಾತುಲಾಯಾಸ್ತು ದ್ವಿಗುಣಂನಕ್ವಚಿತ್ಸ್ಮೃತಂ ॥

---

## ಮಕ್ಕಳಿಗೆ ಔಷಧವನ್ನು ಕೊಡಬೇಕಾದ ಪ್ರಮಾಣ.

ಹನ್ನೆರಡು ವರ್ಷಕ್ಕೆ ಕಡಿಮೆ ವಯಸ್ಸಾದ ಮಕ್ಕಳಿಗೆ ಔಷಧಿ ಕೊಡಬೇಕಾದರೆ ಮಕ್ಕಳ ವಯಸ್ಸನ್ನೂ, ಆ ವಯಸ್ಸಿಗೆ ಹನ್ನೆರಡನ್ನು ಸೇರಿಸಿ ಬಂದ ಸಂಖ್ಯೆಯಿಂದ ಭಾಗಿಸಿ, ಬಂದಷ್ಟು ಭಾಗವನ್ನು ಮಾತ್ರ ಕೊಡಬೇಕು. $\left(\frac{\text{ಮಕ್ಕಳ ವಯಸ್ಸು}}{\text{ಮಕ್ಕಳ ವಯಸ್ಸು}+12}\right)$

**ಉದಾಹರಣೆ.**—ಆರು ವಯಸ್ಸುಳ್ಳ ಮಗುವಿಗೆ ಔಷಧ ಕೊಡಬೇಕಾದರೆ, ಮೇಲೆ ಹೇಳಿದ ನಿಯಮದಂತೆ $\frac{6}{6+12} = \frac{6}{18} = \frac{1}{3}$ ಎಂದರೆ ದೊಡ್ಡವರಿಗೆ ಕೊಡತಕ್ಕ ಪ್ರಮಾಣದಲ್ಲಿ $\frac{1}{3}$ ಭಾಗ ಮಾತ್ರ ಕೊಡಬೇಕು.

12 ರಿಂದ 18 ವಯಸ್ಸುಳ್ಳವರಿಗೆ $\frac{1}{2}$ ದಿಂದ $\frac{3}{4}$ ಭಾಗ ಕೊಡಬಹುದು.

---

# ಸಂಕೇತಪದಗಳು.

**ತ್ರಿಕಟು ತ್ರ್ಯೂಷಣ ವ್ಯೋಷ.**—ಹಿಪ್ಪಲಿ, ಮೆಣಸು, ಶುಂಠಿ.

ಪಿಪ್ಪಲೀಮರಿಚಂಶುಂಠೀ ತ್ರಯಮೇಕತ್ರಮಿಶ್ರಿತಂ ।
ತ್ರಿಕಟುತ್ರ್ಯೂಷಣಂವ್ಯೋಷಂ ಕಟುತ್ರಯಮಿಹೋಚ್ಯತೇ ॥

**ಪಂಚಕೋಲ.**—ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಶುಂಠಿ.

ಪಿಪ್ಪಲೀ ಪಿಪ್ಪಲೀಮೂಲ ಚವ್ಯಚಿತ್ರಕನಾಗರೈಃ ।
ಏಕತ್ರಮಿಶ್ರಿತೈರೇಭಿಃ ಪಂಚಕೋಲಕಮುಚ್ಯತೇ ॥

**ತ್ರಿಫಲಾ.**—ಅಳಲೇಕಾಯಿ, ತಾರೇಕಾಯಿ, ನೆಲ್ಲೀಕಾಯಿ.

ಹರೀತಕೀಚಾಮಲಕಂವಿಭೀತಕಮಿತಿಸ್ಮೃತಂ ।
ತ್ರಿಫಲಾಫಲಮುದ್ದಿಷ್ಟಂ ತಚ್ಚಜ್ಞೇಯಂ ಫಲತ್ರಿಕಂ ॥

**ತ್ರಿಜಾತಕ.**—ಯಾಲಕ್ಕಿ, ಲವಂಗಪತ್ರೆ, ಲವಂಗಚಕ್ಕೆ.

ಏಲಾಲವಂಗಪತ್ರಂಚ ತ್ರಿಸುಗಂಧಂತ್ರಿಜಾತಕಂ ।

**ಚಾತುರ್ಜಾತಕ.**—ಯಾಲಕ್ಕಿ, ಲವಂಗಪತ್ರೆ, ಲವಂಗಚಕ್ಕೆ, ನಾಗಕೇಸರ.

ನಾಗಕೇಸರಸಂಯುಕ್ತಂ ಚಾತುರ್ಜಾತಕಮುಚ್ಯತೇ ।

**ಲಘುಪಂಚಮೂಲ.**—ಮೂರೆಲೆಹೊನ್ನೆ, ಒಂದೆಲೆಹೊನ್ನೆ, ಹೆಗ್ಗುಳ್ಳ, ನೆಲಗುಳ್ಳ, ನೆಗ್ಗಿಲು.

ಶಾಲಿಪರ್ಣೀಪೃಶ್ನಿಪರ್ಣೀ ಬೃಹತೀಕಂಟಕಾರಿಕಾ ।
ತಥಾಗೋಕ್ಷುರಸಂಯುಕ್ತಂ ಪಂಚಮೂಲಮಿದಂಲಘು ॥

**ಮಹತ್ಪಂಚಮೂಲ.**—ಬಿಲ್ವ, ನರುವಲು, ಹೆಮ್ಮರ, ನೆಲಗುಂಬಳ, ಪಾದ್ರಿ.

ಬಿಲ್ವೋಗ್ನಿಮಂಥಃಸ್ಯೋನಾಕಃ ಕಾಶ್ಮರೀಚಾಥಪಾಟಲಾ ।
ಜ್ಞೇಯಂಮಹತ್ಪಂಚಮೂಲಂ ದಶಮೂಲಮುಭೇಯುತೇ ॥

**ದಶಮೂಲ.**—ಮೇಲೆ ಹೇಳಿರುವ ಎರಡು ಪಂಚಮೂಲಗಳೂ ಸೇರಿದರೆ ಅದೇ ದಶಮೂಲವೆನ್ನಿಸಿಕೊಳ್ಳುವುದು.

**ಮಧ್ಯಮಪಂಚಮೂಲ.**—ಕಳ್ಳಂಗಡಲೆ, ಬಿಳೀಕೊಮ್ಮೆ, ಹರಳು, ಒಂದೆಲೆಹೊನ್ನೆ, ಮೂರೆಲೆಹೊನ್ನೆ.

ಬಲಾಪುನರ್ನವೈರಂಡ ಶೂರ್ಪಪರ್ಣೀದ್ವಯೇನಚ ।
ಮಧ್ಯಮಂ ಕಫವಾತಘ್ನಂ ನಾತಿಪಿತ್ತಕರಂಪರಂ ॥

**ಆಮ್ಲಪಂಚಕ.**—ಮಾದಳ, ನಿಂಬೆ, ಹೇರಳೆ, ಹುಳ್ಳಂಬರಸೆ, ಹುಣಸೆ.

ಬೀಜಪೂರಕಜಂಬೀರ ನಾರಂಗಂ ಚಾಮ್ಲವೇತಸಂ ।
ಫಲಪಂಚಾಮ್ಲಕಂಚೈವ ತಿಂತ್ರಿಣೀಕಸಮನ್ವಿತಂ ॥

**ಪಂಚಸುಗಂಧ.**—ಕಸ್ತೂರಿ, ಕೇಸರಿ, ಪಚ್ಚಕರ್ಪೂರ, ಚಂದನ, ಗೋರೋಚನ.

ಕಸ್ತೂರೀಕುಂಕುಮಂಚೈವ ಕರ್ಪೂರಂಚಂದನಂತಥಾ ।
ಗೋರೋಚನೇನಸಂಯುಕ್ತಂ ಪಂಚಸೌಗಂಧಉಚ್ಯತೇ ॥

**ತ್ರಿಕ್ಷಾರಗಳು.**—ಯವಕ್ಷಾರ, ಸರ್ಜಕ್ಷಾರ, ಬಿಳಿಗಾರ.

ಸರ್ಜಕ್ಷಾರಂಯವಕ್ಷಾರಂ ಟಂಕಣಕ್ಷಾರಮೇವಚ ।
ಕ್ಷಾರತ್ರಯಂಸಮಾಖ್ಯಾತಂ ವೈದ್ಯಶಾಸ್ತ್ರವಿಶಾರದೈಃ ॥

**ಪಂಚಲವಣಗಳು.**—ಸೈಂಧವಲವಣ, ಬಿಡಾಲಲವಣ, ಗಾಜುಲವಣ, ಸೌವರ್ಚಲಲವಣ, ಸಮುದ್ರಲವಣ.

ಸೌವರ್ಚಲಂಬಿಡಾಸಂಜ್ಞಂ ಸೈಂಧವಂಕಾಚಮೇವಚ ।
ಸಾಮುದ್ರೇಣಸಮಾಯುಕ್ತಂ ಜ್ಞೇಯಂಲವಣಪಂಚಕಂ ॥

**ಅಷ್ಟಮೂತ್ರಗಳು.**—ಹಸು, ಮೇಕೆ, ಕತ್ತೆ, ಕುದುರೆ, ಒಂಟೆ, ಆನೆ, ಕುರಿ, ಎಮ್ಮೆ.

ಮಾಹಿಷಾಜಾವಿಗೋಶ್ವಾನಾಂ ಖರಾಣಾಮುಷ್ಟ್ರಹಸ್ತಿನಾಂ ।
ಮೂತ್ರಾಷ್ಟಕಮಿತಿಖ್ಯಾತಂ ಸರ್ವಶಾಸ್ತ್ರೇಷುಸಂಮತಂ ॥

---

# ದ್ರವ್ಯಶುದ್ಧಿ.

**ಕಂಪಿಲ್ಲ.**—ಕಂಪಿಲ್ಲವನ್ನು ಹುಡಿಮಾಡಿ ಬಟ್ಟೆಯಲ್ಲಿ ಗಂಟುಕಟ್ಟಿ, ಅಳಲೇಕಾಯಿಯ ರಸದಲ್ಲಿಯಾಗಲೀ ಗಂಜಿಯಲ್ಲಿಯಾಗಲೀ, ಡೋಲಾಯಂತ್ರದಲ್ಲಿ ಪಚನಮಾಡಿದರೆ ಶುದ್ಧವಾಗುವುದು.

**ಬೋಳ.**—ಒಂದುಪಲ ಕರಿಬೋಳ ಅಥವಾ ಕೆಂಪುಬೋಳವನ್ನು ಗಂಜಿಯಲ್ಲಿ ಅರೆದು ಒಣಗಿಸಿದರೆ ಶುದ್ಧವಾಗುವುದು.

**ಮಸ್ತಕಿ.**—ಮಸ್ತಕಿಯನ್ನು ನಿಂಬೇಹಣ್ಣಿನ ರಸದಲ್ಲಿ ಅಥವಾ ನರಮೂತ್ರದಲ್ಲಿ ಒಂದು ಯಾಮ ಅರೆದು ಬಿಸಿಲಿನಲ್ಲಿ ಒಣಗಿಸಿದರೆ ಶುದ್ಧಿ.

**ಕಫರೀ.**—ಕಫರಿಯನ್ನು ಒಂದುಪಲ ತೆಗೆದು ಹುಡಿಮಾಡಿ, ಒಟ್ಟೆಯಲ್ಲಿ ಕಟ್ಟಿ, ಡೋಲಾಯಂತ್ರದಲ್ಲಿಟ್ಟು, ನರಮೂತ್ರದಲ್ಲಿ ಏಳುಯಾಮಗಳೂ, ಗೋಮೂತ್ರದಲ್ಲಿ ಎರಡು ಯಾಮಗಳೂ ಬೇಯಿಸಿದರೂ, ಅಥವಾ ತುಪ್ಪದಲ್ಲಿ ಕಲಸಿ ಬೇಯಿಸಿದರೂ ಶುದ್ಧಿ.

**ಸರ್ಜಕ್ಷಾರ.**—ಸರ್ಜಕ್ಷಾರವನ್ನು ಗಂಜಿ ಅಥವಾ ಗೋಮೂತ್ರದಲ್ಲಿ ಎರಡುಗಳಿಗೆಗಳಕಾಲ ಅರೆದರೆ ಶುದ್ಧಿ.

**ಯವಕ್ಷಾರ.**—ಯವಕ್ಷಾರವನ್ನು ಕಲಗಚ್ಚಿನಲ್ಲಿ ಒಂದು ಘಳಿಗೆ ಅರೆದು ಬಿಸಿಲಿನಲ್ಲಿ ಒಣಗಿಸಿದರೆ ಶುದ್ಧಿ.

**ಪಂಚಲವಣಗಳು.**—ಸೈಂಧವಲವಣವನ್ನು ಎರಡುಘಳಿಗೆ ಕಲಗಚ್ಚಿನಲ್ಲಿ ಇಡಿದು ಬಿಸಿಲಿನಲ್ಲಿ ಒಣಗಿಸಿದರೂ ಅಥವಾ ಕುರಿಯ ಗಂಜಲದಲ್ಲಿ ಬೇಯಿಸಿದರೂ ಶುದ್ಧಿ. ಸೌವರ್ಚಲಲವಣವನ್ನು ನಿಂಬೇಹಣ್ಣಿನರಸದಲ್ಲಿಯೂ, ಬಿಡಾಲಲವಣವನ್ನು ಮಜ್ಜಿಗೆಯಲ್ಲೂ, ಕಾಚಲವಣವನ್ನು ಹುಣಸೇಸೊಪ್ಪಿನ ರಸದಲ್ಲಿಯೂ, ಅರೆದು ಒಣಗಿಸಿದರೆ ಶುದ್ಧಿ. ಸಮುದ್ರಲವಣವನ್ನು ವೋಡಿನಲ್ಲಿ ಹುರಿದರೆ (ಮೂರು ಯಾಮ) ಶುದ್ಧಿ.

**ತ್ರಿಕಟುಕ.**—ಶುಂಠಿಯ ಮೇಲಿನ ಸಿಪ್ಪೆಯನ್ನು ಸುಲಿದು ಹೊಸ ಸುಣ್ಣವನ್ನು ತೊಡೆದು ಒಂದು ಯಾಮ ಬಿಸಿಲಿನಲ್ಲಿ ಒಣಗಿಸಿದರೆ ಶುದ್ಧಿ. ಹಿಪ್ಪಲಿಯನ್ನು ಚಿತ್ರಮೂಲದ ರಸದಲ್ಲಿ ಎರಡು ಘಳಿಗೆ ಅರೆದು ಬಿಸಿಲಿನಲ್ಲಿ

ಒಣಗಿಸಿದರೆ ಶುದ್ಧಿ. ಮೆಣಸನ್ನು ಹುಳಿಮಜ್ಜಿಗೆಯಲ್ಲಿ ಮೂರು ಘಳಿಗೆ ಅರೆದು ಬಿಸಿಲಿನಲ್ಲಿ ಒಣಗಿಸಿದರೆ ಶುದ್ಧಿ.

**ಗಜಪಿಪ್ಪಲಿ.**—ಗಂಜಿ ಅಥವಾ ಆಡಿನ ಮೂತ್ರದಲ್ಲಿ ಒಂದು ಯಾಮ ಅರೆದು ಬಿಸಿಲಿನಲ್ಲಿ ಒಣಗಿಸಿದರೆ ಶುದ್ಧಿ.

**ಕರೀಮದ್ದು.**—ಕರೀಮದ್ದನ್ನು ಬಲರಾಕ್ಷಸೀ ಎಲೆಯಲ್ಲಿ ಇರಿಸಿ, ಗಂಟುಕಟ್ಟಿ, ಹಸುವಿನ ಹಾಲಿನಲ್ಲಿ ಡೋಲಾಯಂತ್ರದಲ್ಲಿ ಒಂದು ಯಾಮ ಬೇಯಿಸಿದರೆ ಶುದ್ಧಿ.

**ಇಂಗು.**—ಇಂಗನ್ನು ತಾವರೇ ಎಲೆಯಲ್ಲಿ ಒಂದು ಯಾಮಕಾಲ ಬಿಸಿಲಿನಲ್ಲಿ ಅರೆದರೆ ಶುದ್ಧಿ.

**ಜೀರಿಗೆ.**—ಜೀರಿಗೆ, ಕರೀಜೀರಿಗೆಯನ್ನು ಗಂಜಿಯಲ್ಲಿ ನೆನೆಸಿ ಎರಡು ಯಾಮ ಬಿಸಿಲಿನಲ್ಲಿ ಒಣಗಿಸಿ, ಕೊಂಚ ಹುರಿದರೆ ಶುದ್ಧಿ.

**ಹರಳುಬೀಜ** }
**ನೆಲದಂತಿಬೀಜ** } ಇವುಗಳನ್ನು ಸಿಪ್ಪೆ ಸುಲಿದು ಎಳನೀರಿನಲ್ಲಿ ಒಂದು ಯಾಮ ಬೇಯಿಸಿದರೆ ಶುದ್ಧಿ.

**ನಾಭೀಗೆಡ್ಡೆ.**—ಗೋಮೂತ್ರದಲ್ಲಿ ಮೂರುದಿನಗಳು ನೆನೆಸಿ, ತೊಳೆದು ಕತ್ತರಿಸಿ ಒಣಗಿಸಿದರೆ ಶುದ್ಧಿ.

**ಉನ್ಮತ್ತೀಬೀಜ.**—ನಿಂಬೇಹುಳಿಯಲ್ಲಿ ಒಂದುದಿನ ನೆನೆಸಿ, ಬಿಸಿಲಿನಲ್ಲಿ ಒಣಗಿಸಿ, ತುಪ್ಪದಲ್ಲಿ ಕೊಂಚ ಹುರಿದರೆ ಶುದ್ಧಿ.

**ಚಿತ್ರಮೂಲ.**—ಬೇರಿನತೊಗಟೆಯನ್ನು ಉಪ್ಪುಹಾಕಿದ ನಿಂಬೇ ಹುಳಿಯಲ್ಲಿ ನೆನೆಸಿ, ಒಣಗಿಸಿದರೆ ಶುದ್ಧಿ.

**ಲೋಳೆಸರ.**—ಇದರ ಬೇರನ್ನು ಕೆಮ್ಮಣ್ಣಿನ ಬಟ್ಟೆಯಲ್ಲಿ ಸುತ್ತಿ, ಸುಟ್ಟು, ಬೆಂದಮೇಲೆ ಹಿಂಡಿದರಸವು ಸನ್ನಿಪಾತಾದಿ ಜ್ವರಗಳಲ್ಲಿಯೂ, ಪಟ್ಟೆಯನ್ನು ಕತ್ತರಿಸಿ ಮೇಲಿನ ತೊಕ್ಕನ್ನು ತೆಗೆದು, ತಿರುಳನ್ನು ತಣ್ಣೀರಿನಲ್ಲಿ ಜಿಗಟು ಹೋಗುವ ವರೆಗೂ ತೊಳೆದು ಬಟ್ಟೆಯಿಂದ ತೊಳೆದು ಬಿಳುಪುರೋಗಗಳಲ್ಲಿಯೂ (ಮೇಹ ಮತ್ತು ಸೋಮರೋಗ) ಕೊಡುವರು.

---

# ಪ್ರತಿನಿಧಿ ದ್ರವ್ಯಗಳು.

ಔಷಧಗಳನ್ನು ಸಿದ್ಧಪಡಿಸುವುದಕ್ಕಾಗಿ ದ್ರವ್ಯ (ಮೂಲಿಕೆ ಮೊದಲಾದುವು) ಶೇಖರ ಮಾಡುವಾಗ ಗ್ರಂಥದಲ್ಲಿ ಹೇಳಿದ ಕೆಲವು ಮೂಲಿಕೆಗಳು ಆ ಸಮಯದಲ್ಲಿ ದೊರೆಯದೇ ಹೋಗುವ ಸಂಭವವೂ ಉಂಟು. ಅಂತಹ ಸಂದರ್ಭದಲ್ಲಿ ಅಂಥವುಗಳಿಗೆ ಬದಲಾಗಿ ಅದೇ ಗುಣವುಳ್ಳ ಇತರ ದ್ರವ್ಯಗಳನ್ನು ಸೇರಿಸಿ ಔಷಧಿಯನ್ನು ತಯಾರಿಸಬಹುದೆಂದು ವೈದ್ಯಶಾಸ್ತ್ರದ ಸಮ್ಮತಿಯುಂಟು. ಹಾಗೆ ಬದಲಾಗಿ ಸೇರಿಸುವ ದ್ರವ್ಯ ಅಥವಾ ಮೂಲಿಕೆಗಳಿಗೆ ಪ್ರತಿನಿಧಿ ದ್ರವ್ಯಗಳೆಂದು ಹೆಸರು. ಅಂತಹ ಕೆಲ ದ್ರವ್ಯಗಳ ಪಟ್ಟಿಯನ್ನು ಇಲ್ಲಿ ಕೊಟ್ಟಿದೆ.

| ದ್ರವ್ಯ. | ಪ್ರತಿನಿಧಿ. |
|---|---|
| ದ್ರಾಕ್ಷಿ | ಖರ್ಜೂರ ಅಥವಾ ಅತಿಮಧುರ |
| ಹಿಪ್ಪಲಿ | ಮೆಣಸು |
| ಶುಂಠಿ | ಹಶೀ ಶುಂಠಿ |
| ಮೆಣಸು | ಹಿಪ್ಪಲಿ |
| ರಾಸ್ನೆ | ಶುಂಠಿ |
| ಅತಿಮಧುರ | ಜಟಾಮಾಂಸಿ |
| ತುಂಗಮುಸ್ತೆ | ಗ್ರಂಥಿಕ ತಗರ |
| ಲವಂಗ | ಧಾತಕೀ ಕುಸುಮ |
| ಜೀರಿಗೆ | ಕರೀಜೀರಿಗೆ |
| ಗಂಟುಫರಂಗಿ | ನೆಲಗುಳ್ಳದ ಬೇರು |
| ಯಾಲಕ್ಕಿ | ತಾಳೀಸಪತ್ರೆ |
| ಪುಷ್ಕರಮೂಲ | ಚಂದನ ಅಥವಾ ತಾವರೇ ದಂಟು |

| ದ್ರವ್ಯ. | ಪ್ರತಿನಿಧಿ. |
|---|---|
| ಕುಂಕುಮ ಕೇಸರಿ | ಪದ್ಮಕೇಸರ |
| ಮಹಿಷಾಕ್ಷಿಗುಗ್ಗುಳ | ಜೇವಿನ ಬಂಕೆ |
| ಇತರ ಲವಣಗಳು | ಸೈಂಧವಲವಣ |
| ಕರಿಬೇವು | ಬಿಳೀ ಕೊಮ್ಮೆ |
| ಬಿಳೀಕೊಮ್ಮೆ | ಚಿಟ್ಟೆಚಿಟ್ಟನ ಸೊಪ್ಪು |
| ಹೆಮ್ಮರದ ಚಕ್ಕೆ | ಹೊಂಗೇಚಕ್ಕೆ, ನವಲಾಡೀಚಕ್ಕೆ |
| ಗೇರುಬೀಜ | ಚಿತ್ರಮೂಲ |
| ಬಿಲ್ವಪತ್ರೆಬೇರು | ಬೇಲದ ಬೇರು |
| ಬೋಳಗಡಲೆ | ಕಳ್ಳಂಗಡಲೆ |
| ತುರುಚಿ | ಕಿರದುರುಚಿ |
| ಅಗಳುಶುಂಠಿ | ತುರುಚಿ |
| ನೆಲಗುಳ್ಳ | ಹೆಗ್ಗುಳ್ಳ |
| ಮುಳ್ಳುಮುತ್ತುಗ | ಮುತ್ತುಗ |
| ಮೋಡಿ | ಮೆಣಸು |
| ಮುಂಡಗಳ್ಳಿ | ಚಮ್ಮ, ನಾರಂಬೇಳೆ, ಕರೀನಾರಂಬೇಳೆ |
| ಲಾಮಂಚ | ಶ್ರೀಗಂಧ |
| ದಂತಿಬೇರು | ತಿಗಡೆ, ಚಿತ್ರಮೂಲ |
| ಅಳಲೇಕಾಯಿ | ತಾರೇಕಾಯಿ |
| ಸಕ್ಕರೆ ಮತ್ತು ಜೇನುತುಪ್ಪ | ಬೆಲ್ಲ |
| ಹಸುವಿನ ತುಪ್ಪ | ಮೇಕೆತುಪ್ಪ |
| ಹಸುವಿನ ಹಾಲು | ಮೇಕೆಯ ಹಾಲು |
| ಎಮ್ಮೆ ಹಾಲು | ಕುರಿಹಾಲು |
| ಹಾಲು | ಹೆಸರು ಕಟ್ಟು, ಕಿರುಗಡಲೆಕಟ್ಟು |

| ದ್ರವ್ಯ. | ಪ್ರತಿನಿಧಿ. |
| --- | --- |
| ಕಡಲೆ<br>ಹೆಸರು | ಹಾಲು |
| ವೃದ್ಧಿಗೆ | ನೆಲಗುಂಬಳ |
| ಮಹಾವೃದ್ಧಿ | ನೆಲತಾಳೀಗಡ್ಡೆ |
| ಕಾಕೋಳಿ | ಸೊಗದೇಬೇರು |
| ಕ್ಷೀರಕಾಕೋಳಿ | ಆಷಾಢಿ |
| ಮೇಧೆ | ಕೆಂದಾವರೆ ಗೆಣಸು |
| ಮಹಾಮೇಧೆ | ಸೆಗ್ಗಿಲು |
| ಜೀವಕ | ಹಾಲೇಬೇರು |
| ಋಷಭಕ | ಕಳ್ಳಂಗಡಲೆ |

ಮೂಲಿಕೆಗಳಲ್ಲಿ, ಎಲೆ, ಹೂ, ಇತ್ಯಾದಿ ಅವಯವಗಳನ್ನು ನಿರ್ದೇಶಿಸಿ ಹೇಳದಿದ್ದಲ್ಲಿ ಬೇರನ್ನೇ ಉಪಯೋಗಿಸಬೇಕು. ಬೇರು ದೊರೆಯದಲ್ಲಿ ಬೇರಿಗೆ ಸಮನಾದ ಭಾಗ ಗುಣವುಳ್ಳ ಭಾಗವನ್ನೇ ಹಾಕಬೇಕು.

ಹಾಲು, ತುಪ್ಪಗಳಲ್ಲಿ ನಿರ್ದೇಶಿಸಿ ಹೇಳದಿದ್ದರೆ ಹಸುವಿನ ಹಾಲು, ತುಪ್ಪಗಳೆಂದೂ—ಎಣ್ಣೆಯನ್ನು ನಿರ್ದೇಶಿಸದಿದ್ದಲ್ಲಿ ಎಳ್ಳೆಣ್ಣೆ ಎಂದೂ—ಮೂತ್ರವನ್ನು ನಿರ್ದೇಶಿಸದಿದ್ದಲ್ಲಿ ಗೋಮೂತ್ರವೆಂದೂ—ಕ್ಷಾರಗಳು ನಿರ್ದೇಶಿಸದ ಕಡೆಯಲ್ಲಿ ಯವಕ್ಷಾರವೆಂದೂ—ಲವಣವೆಂದು ನಿರ್ದೇಶಿಸದಿದ್ದಲ್ಲಿ ಸೈಂಧವ ಲವಣವೆಂದೂ—ಲವಣಗಳು ಎಂದು ನಿರ್ದೇಶಿಸಿದಲ್ಲಿ ಪಂಚಲವಣಗಳೆಂದೂ ತಿಳಿಯಬೇಕು.

# ಪ್ರತಿನಿಧಿ ದ್ರವ್ಯಗಳು.

ಖರ್ಜೂರಂವಾ ಮಧೂಕಂವಾ ದ್ರಾಕ್ಷಾಭಾವೇತುವಿನ್ಯಸೇತ್ ।
ಪಿಪ್ಪಲ್ಯಾಂ ಮರಿಚಂ ಶುಂಠ್ಯಾಂ ಚಾರ್ದ್ರಕಂಕಣ ಮೂಷಣಾ ॥
ರಾಸ್ನಾಯಾಂ ನಾಗರಂ ಯಷ್ಟ್ಯಾಂ ಜಟಾಮುಸ್ತಾಕುಟಂ ನಟಂ ।
ವರಾಳೇಧಾತಕೀಪುಷ್ಪಂ ಜೀರಕೇಕೃಷ್ಣಜೀರಕಂ ॥
ಭಾರ್ಙ್ಗ್ಯಂ ವಿದಗ್ಧಿಕಾಮೂಲಂ ಏಲಾತಾಳೀಸಪತ್ರಕಂ ।
ಸೇವ್ಯೇಹಿಮಂ ಮೃಣಾಳಂವಾಕುಂಕುಮೇಪದ್ಮಕೇಸರಂ ॥
ಅಷ್ಟವರ್ಗೇಷು ಜೀವಂತಿ ಮಧೂಕಂವಾಬಲಾತ್ರಯಂ ।
ಗುಗ್ಗುಲೌ ನಿಂಬನಿರ್ಯಾಸಂಸೈಂಧವಂಲವಣಾಂತರೇ ॥
ಕಾಳಶಾಖೇತಿ ವರ್ಷಾಭ್ರೂತದಭಾವೇಸುನಾಡಿಕಾ ।
ಕರಂಜಯುಗ್ಮಂಕಟ್ವಂಗೇ ಚಿತ್ರಮೂಲಂತುರುಷ್ಕರೇ ॥
ಕಪಿತ್ಥ ಬಿಲ್ವಮೂಲೇಚ ಬಲಾಯಾಂತುಮಹಾಬಲಾ ।
ದುರಾಲಭಾಧನ್ವಯಾಸಾಪಾಠಾಯಾಂ ಧನ್ವಯಾಸಕಂ ॥
ವಿದಗ್ಧಿಕಾಯಾಂ ಬೃಹತೀಕಿಂಶುಕಂ ಬ್ರಹ್ಮಬೂರುಹೀ ।
ಗ್ರಂಥಿಕೇಮರಿಚಂಚವ್ಯಂ ಗಂಡೀರೇಬರ್ವರಿದ್ವಯಂ ॥
ಲಾಮಜ್ಜಕೇಮಲಯಜಂ ಉಷೀರೇಗೋಪಕನ್ಯಕಾ ।
ದಂತ್ಯಾತ್ರಿವೃತ್ ಚಿತ್ರಕೋವಾಹರೀತಕ್ಯಾಂ ವಿಭೀತಕಿಃ ॥
ಶರ್ಕರಾಯಾಂಗುಡಂ ಕ್ಷೌದ್ರೇಸಜೀರ್ಣಂತಿಲಜಂಘೃತೇ ।
ಆಜಂಗವ್ಯೇಪಯಸ್ಯಾಜ್ಯೇಮಾಹಿಷೇಚಾವಿಕಂಪಯಃ ॥
ಕ್ಷೀರೇಮುದ್ಗೋದ್ಭವಂ ಯೂಷಂ ಮಸೂರೋಮುದ್ಗಜೇಪುನಃ ।
ಮಸೂರಯೂಷೇ ಕ್ಷೀರಂವಾ ವ್ರೀಹಯಃ ಶಾಲಿಜಾತಿಷು ॥
ತೈಲೇಷ್ವೇರಂಡಜಂತ್ವೈರೂ ರಕ್ತೇರಂಡೋದ್ಭವಂತಥಾ ।
ಮಯೂರಕುಕ್ಕುಟೇವನ್ಯೇ ಕುಕ್ಕುಟಾಶ್ಚಾಪಿಬರ್ಹಿಣಿ ॥
ಮಾಂಸೇಷುಮತ್ಸ್ಯಾಃ ಮತ್ಸ್ಯೇಷುಶಂಬೂಕಾಸ್ತೇಷುಶುಕ್ತಯಃ ।
ಸುವರ್ಣೇರಜತಂ ಲೋಹಂ ತದನ್ಯರಜತೇಪಿಚ ॥
ಅನ್ಯೋನ್ಯಮೇವ ಮನ್ಯದ್ವದ್ರವ್ಯಂ ಯುಕ್ತ್ಯಾಪ್ರಕಲ್ಪಯೇತ್ ।
ಅನಿರ್ದಿಷ್ಟಘೃತೇಕ್ಷೀರೇ ವಿಶೇಷಾದ್ಗವಮಿಶ್ರಿತೇ ॥

ತ್ಯೈಲೇಷುತಿಲತ್ಯೈಲಂಚಗೋಮೂತ್ರಂ ಮೂತ್ರವರ್ಗಕೇ ।
ಕ್ಷಾರೇಷುಯಾವಶೂಕಂ ಸ್ಯಾತ್ಲವಣೇಷುಚಸ್ಯೆಂಧವಂ ॥
ಲವಣಾನಾಂಪ್ರಯೋಗೇಷು ಸ್ಯೆಂಧವಾದೀನ್ಪ್ರಕಲ್ಪಯೇತ್ ।
ವೃದ್ಧಿಃ ವಿವೃದ್ಧಿಃ ಕಾಕೋಳಿಃ ಕ್ಷೀರಕಾಕೋಳಿಕಂತಥಾ ॥
ಮೇಧಾಚಾಪಿ ಮಹಾಮೇಧಾ ಜೀವಕಂವೃಷಭಕಂತಥಾ ।
ಅಭಾವೇಷ್ವಷ್ಟವರ್ಗೇಷು ಪ್ರತಿದ್ರವ್ಯಾಣಿದಾಪಯೇತ್ ॥
ವಿದಾರೀಸ್ವರ್ಣಪುಷ್ಪೀಚ ಶಾರಿಬಾಚಶತಾವರೀ ।
ರಕ್ತೋತ್ಪಲಂಶ್ವದಂಷ್ಟ್ರಾಚ ಕೋಲಪರ್ಣೀಬಲಾತಥಾ ॥

---

# ಅನುಪಾನಗಳು.

[ಎಂದರೆ ಯಾವ ರೋಗದಲ್ಲಿಯಾದರೂ ಅದಕ್ಕೆ ಉಕ್ತವಾಗಿರುವ (ಅನುಪಾನ) ಔಷಧ ಸಂಬಂಧದಿಂದ, ಇತರ ಔಷಧಗಳು ದೇಹದಲ್ಲಿ ಚೆನ್ನಾಗಿ ವ್ಯಾಪಿಸುವವು]

| ವ್ಯಾಧಿ | ಅನುಪಾನ |
|---|---|
| ಜ್ವರಕ್ಕೆ | ಚಿರಾಯಿತ, ಕೊನ್ನಾರಿಗೆಡ್ಡೆ ಪರ್ಪಾಷ್ಟಕ |
| ಸಂಗ್ರಹಿಣಿ | ಮಜ್ಜಿಗೆ |
| ಅತೀಸಾರ | ಕೊಡಸಿಗೆ |
| ಕ್ರಿಮಿರೋಗ | ವಾಯುವಳಂಗ |
| ಮೂಲವ್ಯಾಧಿ | ಗೇರು |
| ಪಾಂಡು | ಮಂಡೂರ |
| ಕ್ಷಯಕ್ಕೆ | ಶಿಲಾಜಿತು |
| ಶ್ವಾಸಕ್ಕೆ | ಭಾರ್ಙ್ಗೀ |
| ಪ್ರಮೇಹಕ್ಕೆ | ನೆಲ್ಲೀಕಾಯಿ |
| ಬಾಯಾರಿಕೆ | ಚಿನ್ನವನ್ನು ಕಾಸಿ ಅದ್ದಿದ ನೀರು |
| ಶೂಲೆಗೆ | ಇಂಗು, ಹೊಂಗೆಗಳು |
| ಆಮವಾತಕ್ಕೆ | ಗೋಮೂತ್ರ, ಹರಳೆಣ್ಣೆ |
| ಪ್ಲೀಹಕ್ಕೆ | ಹಿಪ್ಪಲಿ |
| ವಿಷಕ್ಕೆ | ಬಾಗೆ |
| ಕಾಸಕ್ಕೆ | ನೆಲಗುಳ್ಳ |
| ವಾತವ್ಯಾಧಿಗಳಲ್ಲಿ | ಗುಗ್ಗುಳ ಮತ್ತು ಬೆಳ್ಳುಳ್ಳಿ |
| ರಕ್ತಪಿತ್ತದಲ್ಲಿ | ಆಡುಸೋಗೆ |
| ಅಪಸ್ಮಾರ | ಬಜೆ |

| ವ್ಯಾಧಿ | ಅನುಪಾನ |
|---|---|
| ಕೈಮರ್ದಿಗೆ | ಟಂಕಣಕ್ಷಾರ |
| ಮೋಹ ಮತ್ತು ಉದರದಲ್ಲಿ | ರೇಚನ |
| ರಕ್ತವಾತದಲ್ಲಿ | ಅಮೃತವಲ್ಲಿ |
| ಅರ್ದಿತವಾಯು | ಉದ್ದಿನ ವಡೆ |
| ಮೇದೋರೋಗ | ಜೇನುತುಪ್ಪದೊಡನೆ ಸೇರಿದ ನೀರು |
| ಪ್ರದರ | ಲೋಧ್ರ ಚಕ್ಕೆ |
| ಅರುಚಿಯಲ್ಲಿ | ಮಾದಳದ ಹಣ್ಣು |
| ವ್ರಣದಲ್ಲಿ | ತ್ರಿಫಲ, ಗುಗ್ಗುಳ |
| ಶೋಕದಲ್ಲಿ | ಮದ್ಯ |
| ಆಮ್ಲಪಿತ್ತ | ದ್ರಾಕ್ಷಿ |
| ಮೂತ್ರಕೃಛ್ರ | ಆಷಾಢೀಬೇರು, ಬೂದುಗುಂಬಳರಸ |
| ನೇತ್ರರೋಗ | ತ್ರಿಫಲೆ |
| ಉನ್ಮಾದ | ಹಳೇ ತುಪ್ಪ |
| ಕುಷ್ಠ | ಕಗ್ಗಲೀ ಚೇಗು |
| ನಿದ್ರಾನಾಶ | ಎಮ್ಮೇ ಹಾಲು |
| ತೊನ್ನು | ಬಾಗುಂಜಿ |
| ಅಜೀರ್ಣ | ನಿದ್ರೆ |
| ಭಯ | ಆನಂದ |
| ವಾಂತಿ | ಭತ್ತದ ಅರಳು, ಜೇನುತುಪ್ಪ |
| ಕುತ್ತಿಗೆಯಿಂದ ಮೇಲಿನ ರೋಗ | ನಸ್ಯ |
| ಪಾರ್ಶ್ವಶೂಲೆ | ಪುಷ್ಕರಮೂಲ |
| ಮೂರ್ಛೆ | ಶೀತೋಪಚಾರ |
| ಕೃಶತ್ವ | ಮಾಂಸರಸ |
| ಅಶ್ಮರೀ | ಬಿಳೀ ಹಿಂಡೇಸೊಪ್ಪು |
| ಗುಲ್ಮ | ನುಗ್ಗೇಚಕ್ಕೆ |

# ಅನುಪಾನ.

ಕೈರಾತಾಂಬುದ ಪರ್ಪಟಂ ಜ್ವರಗದೇ ತಕ್ರಂ ಗ್ರಹಣ್ಯಾಮಥಾ
ತೀಸಾರೇ ಕುಟಜಃ ಕ್ರಿಮೌ ಕ್ರಿಮಿರಿಪುಃ ದುರ್ನಾಮಕೇ ರುಷ್ಕರಂ ।
ಪಾಂಡೌ ಕಿಟ್ಟಮಥ ಕ್ಷಯೇ ಗಿರಿಜತುಃ ಶ್ವಾಸೇ ತು ಭಾರ್ಙ್ಗೌಷಧಂ
ಮೇಹೇ ತ್ವಾಮಲಕಂ ಕ್ಷಯೇ ತೃಷಿ ಜಲಂ ಸಂತಪ್ತಹೇಮಾನ್ವಿತಂ ॥
ಶೂಲೇ ಹಿಂಗು ಕರಂಜಮಾಮಪವನೇ ತೈಲಂ ರುಬೋಃ ಮೂತ್ರಯುಕ್
ಶ್ರೀಷ್ವಾತ್ಪ್ಲೀಹ್ನಿ ಕಣಾ ವಿಷೇ ಶುಕತರುಃ ಕಾಸೇ ತು ಕಂಟಾರಿಕಾ ।
ವಾತವ್ಯಾಧಿಷು ಗುಗ್ಗುಲಶ್ಚ ಲಶುನಃ ಸ್ಯಾದ್ರಕ್ತಪಿತ್ತೇ ವೃಷೋ
ಽಪಸ್ಮಾರೇ ತು ವಚಾಸವಾ ಗಧಗರೇ ಹೇಮೋದರೇ ರೇಚನಂ ॥
ವಾತಾಸ್ರೇ ತು ಗುಡೂಚಿಕಾರ್ದ್ರಿತಗದೇ ಮಾಷೇಂಡರೀ ಮೇದಸಿ
ಕ್ಷೌದ್ರಾಂಬು ಪ್ರದರೇ ಕಿರೀಟಮರುಚೌ ಲುಂಗೋ ವ್ರಣೇ ಗ್ರಃಪುರಃ ।
ಶೋಕೇ ಮದ್ಯಮಥಾಮ್ಲಪಿತ್ತರುಜಿ ತು ದ್ರಾಕ್ಷಾಥ ಕೃಚ್ಛ್ರೇ ವರೀ
ಕೂಶ್ಮಾಂಡಾಂಬು ದೃಗಾಮಯೇ ತು ತ್ರಿಫಲೋನ್ಮಾದೇ ಪುರಾಣಂ ಘೃತಂ ॥
ಕುಷ್ಠೇ ಖಾದಿರಸಾರವಾರ್ಯಥ ಪಯೋ ನಿದ್ರಾಕ್ಷಯೇ ಮಾಹಿಷಂ
ಶ್ವಿತ್ರೇ ಬಾಕುಚಿಫಲ್ಯ ಜೀರ್ಣರುಜಿ ತು ಸ್ವಾಪೋ ಭಯೇ ತೋಷಣಂ ।
ಛರ್ದೌ ಲಾಜಮಥೂರ್ಧ್ವಜತ್ರು ವಿಕೃತೌ ನಸ್ಯಂ ಸುತೀಕ್ಷ್ಣೌಷಧಂ
ಶೂಲೇ ಪಾರ್ಶ್ವಭವೇ ತು ಪುಷ್ಕರ ಜಟಾ ಮೂರ್ಛಾಸು ಶೀತೋ ವಿಧಿಂ ॥
ಕಾರ್ಶ್ಯೇ ಮಾಂಸರಸೋಶ್ಮರೀಷು ಗಿರಿಭೃತ್ ಗುಲ್ಮೇಷು ಶಿಗ್ರುತ್ವಚೌ ॥

---

ಆಸೀದ್ಯೈಃ ಪರಿರಕ್ಷಿತಾ ಬತ ಗವಾಂ ಗೋವರ್ಧನೋತ್ಪಾಟಿತಃ
ಲೋಕಾನಾಂ ಸುಖಮಾತತಾನ ನಿತರಾಂ ಕಂಸಂ ಪ್ರಹಂತಾಚಯಃ ।
ತಸ್ಯಾಶ್ಚರ್ಯ ಗುಣವ್ರಜಸ್ಯ ಮಹತಃ ಕೃಷ್ಣಸ್ಯ ರಾಧಾಪತೇಃ
ವರ್ತಂತಾಂ ಫಲದಾಯಕಾಃ ಮಯಿ ಸದಾ ಪೂರ್ಣಾಃ ಕಟಾಕ್ಷಾ ಹಿತೇ ॥
ಶ್ರೀಮಲ್ಲೋಲಂಬರಾಜ ಪ್ರಥಿತಕವಿಕೃತಂ ವೈದ್ಯಜೀವನ್ಯಭಿಖ್ಯಂ
ವೈದ್ಯಾವೋದಂ ಪ್ರಬಂಧಂ ದುರವಗಮತಮಂ ಮಂದಬುಧ್ಯಾಯುತಾನಾಂ ।

ದೃಷ್ಟ್ವಾ ಗೂಡಾರ್ಥವೃಂದ ಪ್ರವಿಲಸನಕೃತೇ ಪುಟ್ಟಸಾಮ್ಯೈಯ್ಯಸೂರಿಃ
ಕಾರ್ಣಾಟಿಕ್ಯಾ ಚ ಕಾಂಚಿತ್ ವ್ಯರಚಯದತುಲಾಂ ದೀಪಿಕಾಂಭಾಸಮಾನಾಂ ||
ತಾಮೇತಾಂ ಪ್ರಥಿತಾಂಪದಾರ್ಥನಿಕರ ಪ್ರಾದೀಪಿಕಾಂ ದೀಪಿಕಾಂ
ನಿರ್ದೋಷಾ ಮನುಸೃತ್ಯ ಪದ್ಧತಿಮಿಹ ವ್ಯಾಪ್ತಾಮಿದಾನೀಂತನಾಂ |
ಟಿಪ್ಪಣ್ಯಾಕೃತಯಾಸ್ವತಃಸಹಬಹಿಃ ಪ್ರಾಚೀಕಟತ್ಸರ್ವತಃ
ಸಮ್ಮುದ್ರಾಪ್ಯತದಾತ್ಮಜಃ ಕವಿವರಃ ವೆಂಕಟ್ಟರಾಮಾಭಿದ ||



## NOT A SERIOUS PAGE.



He must not walk his rounds for fear his patients think him poor,
And dearly do they love to see a carriage at their door;
And if his horse is fat, "He must have little work to do."
And if he's lean the reason is, "He starves the poor old screw."
Should he call upon his patients every day when they are ill,
His motive plainly is, "To raise a great big doctor's bill."
If he visits them less frequently—thus less'ning their expense—
The chances are he'll be accused of wilful negligence.
He must work all day and half the night, and never say he's tired,
For the public look upon him simply as a servant hired;
And should he take a holiday, he'll find, when he comes back,
Some patients have resented it by giving him "the sack."

Concerning money he must seem indifferent to be,
And folks will think he practises from pure philanthropy;
When we hear him about boasting of the guineas that he earns,
We wonder if they all appear in his income-tax returns.
About his own afflictions he must never say a word;
The notion of a doctor being ill is so absurd!
And when, perhaps from overwork, he's laid upon the shelf
His sympathising patients say: "Physician, heal thyself."

[**Srinivasan's Medical Diary.**]

" Try to have a fair knowledge of Sanskrit before you begin to study Ayurveda. Learning Sanskrit,—at least so much as to prepare one for the study in question,—is not so difficult as it is usually supposed, especially if the attempt is made to learn the language, more than to learn the intricacies of Sanskrit Grammar. I know some friends of mine, in the Medical circle, who have taken great pains to learn French or German, in order to be able to read certain works on Medicine and Pathology, in original. Now, if knowledge of French or German is useful and important in the study of Western Medical literature, the knowledge of Sanskrit is essential and indispensable in the study of Eastern Medical lore. Again the Bengali and English translations of Ayurvedic works that have been published now and again, are mostly the work of mercenary and—lay even irresponsible—men, who know and care to know little of the technique of the Medical Science. These translations, very unlike the excellent English renderings of the German or French works, betray ignorance and lead to mis-interpretation. * * * * * * And for those honest students of Eastern Medical literature who have the mind but not at present the means of Sanskrit knowledge to learn the subject fully, I have only to add—*Beware of these apparitions* !!

" The theory of Vayu, Pittha and Kapha was also a great discovery which, unfortunately, has been much misunderstood by Western scholars

judging by the wrong mercenary translations rendering these terms as "Wind, Bile and Phlegm." The proper explanation of this theory will take up a treatise by itself but let me observe here, by passing, that the word "Vayu" does not imply wind in Ayurvedic literature but comprehends all the phenomena which come under the functions of Central and Sympathetic Nervous Systems; that the word "Pittha" does not essentially mean bile but signifies the function of the thermo-genesis or heat-production, and Metabolism,—comprehending in its scope the process of digestion, coloration of blood and formation of the various secretions and excretions which are either the means or ends of tissue combustion; and that the word "Kapha" does not mean phlegm but is used primarily to imply the function of thermo-taxis or heat-regulation and secondarily the formation of the various preservative fluids, *e.g.*, Mucus, Synovia, etc.

"It must be remembered that the theory of Vayu, Pittha and Kapha is not the same as the old exploded humoural theory of the Greek and Roman physicians of old, who, though they borrowed the idea from Ayurveda failed to grasp the true meaning of the theory. I am convinced that the truth and the value of the Ayurvedic theory can be verified. It affords sensible explanations of certain otherwise inexplicable facts in the causation and amelioration of diseases and their symptoms. It can guide you in understanding the laws of general therapeutics which it would be

much to the advantage of any medical man to learn. I dare say that studying the subject with an open mind, he will be converted to believe in the theory. As we find in daily practice, even the half-educated Ayurvedic physician who remembers the laws of etiology and therapeutics and dietary hinging upon this theory fares pretty well by the bed-side of the patient." **Mahamahopadhyaya Gananatha Sen, Vidyanidhi, Saraswati, M.A., L.M.S.**

"The three words, Vayu, Pittha and Sleshma (Kapha) were unfortunately translated in their literal sense by some early European writers as wind, bile and phlegm and the theory judged through the light of such translations is found to be inexplicable and sometimes absurd. The subject is full of difficulties and requires much investigation and knowledge of the other contemporary Shastras of Yoga and Sankhya in order to clearly understand the minute details of the theories contained in Ayurvedic literature. It is but reasonable that it ought to be so. No one can understand the theoretical portions of Organic Chemistry without an elementary knowledge of Biology, Physiology and Physics." **Dr. Lakshmipathi, B.A., M.B. & C.M.**

"The bridge of medicine that spans the gulf between health certainly and disease is so gigantic that man has yet to travel a long distance before he sees on how many pillars it stands. It certainly does not stand on a single pillar of a

